# ಕನ್ನಡ ಸಂಶೋಧನೆಗೆ ಡಾ. ಶ್ರೀನಿವಾಸ ಹಾವನೂರರ ಕೊಡುಗೆ




ರವೀಂದ್ರನಾಥ ಶೆಟ್ಟಿ ಕೆ.

# ಕನ್ನಡ ಸಂಶೋಧನೆಗೆ ಡಾ. ಶ್ರೀನಿವಾಸ ಹಾವನೂರರ ಕೊಡುಗೆ

ರವೀಂದ್ರನಾಥ ಶೆಟ್ಟಿ ಕೆ.

ಭಾಗೀರಥಿ ಪ್ರಕಾಶನ
ಮಂಜೇಶ್ವರ

**Kannada Samsodhanege Dr. Havanoorara Koduge**

A M.Phil thesis submitted to the Kannada Vishwavidyanilaya, Hampi

by

**Ravindranatha Shetty**
'Karpikar'
Pathoor Post & Village
Via Manjeshwara, Kasaragod Taluk - 671 323
Mobile : 9343782270

Published by
**Bhagirathi Prakashana**
'Karpikar'
Pathoor Post & Village
Via Manjeshwara, Kasaragod Taluk - 671 323
Mobile : 9343782270



First Impression : 2013

Copies : 1000

Pages : viii+78

Price : Rs. 90

Cover Design : **Permude Mohan Kumar**

Page Designed & Printed :
**Aakrithi Prints**
Light House Hill Road
Mangalore - 575001
Tel. : 0824 2443002

# ಮೊದಲಿಗೆ ಹೇಳಬೇಕಾದ್ದು....

ಯುವಮಿತ್ರ ರವೀಂದ್ರನಾಥ ಶೆಟ್ಟಿ ಕನ್ನಡವನ್ನು ತಿಳಿದು ಬರೆಯಬಲ್ಲ, ಅನುಭವಿಸಿ ಮಾತನಾಡಬಲ್ಲವರೆಂಬುದನ್ನು ಅವರ ಜೊತೆಗಿನ ಮೊದಲ ಭೇಟಿಯಲ್ಲೇ ಮನದಟ್ಟುಮಾಡಿಕೊಂಡೆ. ಕನ್ನಡದಲ್ಲಿ ಎಂ.ಫಿಲ್. ಮಾಡುವ ಉದ್ದೇಶದಿಂದ ನನ್ನ ಬಳಿ ಬಂದ ಈ ಯುವಕನಿಗೆ ಮಾರ್ಗದರ್ಶನ ಮಾಡಲು ಹಿಂದೆ ಮುಂದೆ ನೋಡದೆ ಒಪ್ಪಿಕೊಂಡೆ. ಪ್ರತಿಹೆಜ್ಜೆಯಲ್ಲೂ ಮಾರ್ಗದರ್ಶಕ ಹಿಂದೆಯೇ ಇರಬೇಕೆಂದು ನಿರೀಕ್ಷಿಸುವ ವಿದ್ಯಾರ್ಥಿ ಈತನಾಗಿರಲಿಲ್ಲ. ದಾರಿ ತೋರಿದರೆ ಸಾಕು, ಮುಂದಕ್ಕೆ ಸಾಗುವಷ್ಟು ಸಾಮರ್ಥ್ಯ ಈತನಿಗಿರುವುದನ್ನು ಕಂಡುಕೊಂಡೆ.

ಕನ್ನಡದ ಅಪ್ರತಿಮ ಸಂಶೋಧಕರಲ್ಲಿ ಒಬ್ಬರೆನಿಸಿದ ನಾಡೋಜ ಶ್ರೀನಿವಾಸ ಹಾವನೂರರ ಕುರಿತು ಎಂ.ಫಿಲ್. ಮಾಡುವುದಕ್ಕೆ ರವೀಂದ್ರನಾಥ ಶೆಟ್ಟಿ ಅವರು ಹೊರಟಾಗ ನಾನದನ್ನು ಸಹಜವಾಗಿಯೇ ಅನುಮೋದಿಸಿದೆ. ಹಾವನೂರರು ನನ್ನ ಮಾರ್ಗದರ್ಶಕರು. ಅವರ ಪಾಡಿಗೆ ಅವರೊಂದು ಶಕ್ತಿಕೇಂದ್ರ. ಕನ್ನಡದ ಯಾವ ಪ್ರಮುಖ ಸಾಹಿತಿಯ ಕುರಿತಾದ ಮಾಹಿತಿ ಬೇಕಿದ್ದರೂ ಅವರಲ್ಲಿ ಸಂಗ್ರಹದಲ್ಲಿ ಇದ್ದೇ ಇರುತ್ತಿತ್ತು. ಕನ್ನಡದ ಅದೆಷ್ಟೋ ಸಾಹಿತಿಗಳ ಹಾಗೂ ಸಾಹಿತ್ಯದ ಮಾಹಿತಿ ವಿದೇಶಗಳಲ್ಲಿದ್ದುದನ್ನರಿತು, ಪತ್ತೆಹಚ್ಚಿ–ಅದು ಇಂಗ್ಲೆಂಡ್ ಇರಲಿ, ಜರ್ಮನಿ ಇರಲಿ–ಅಲ್ಲೆಲ್ಲ ಅಲೆದಾಡಿ, ಪತ್ತೆಹಚ್ಚಿ ತಂದುಕೊಟ್ಟವರು ಡಾ. ಹಾವನೂರರು. ಸಂಶೋಧನ ಸಹಾಯ ಬೇಡಿ ಅವರಲ್ಲಿಗೆ ಹೋದವರು ಬರಿಗೈಯಲ್ಲಿ ಹಿಂದಿರುಗಿದ ಪ್ರಮೇಯವೇ ಇಲ್ಲ.

ಕೇವಲ ಸಂಶೋಧಕ ಎಂದಷ್ಟೇ ಅವರಿಗೆ ಮುದ್ರೆ ಹಚ್ಚಬೇಕಾದ ಅಗತ್ಯವಿಲ್ಲ. ಕನ್ನಡದ ಅತ್ಯುತ್ತಮ ಕತೆಗಾರರಾಗಿದ್ದ ಅವರು ಒಳ್ಳೆಯ ಪ್ರಬಂಧಗಳನ್ನು ರಚಿಸಿದ್ದಾರೆ. ಕಾದಂ ಕಥನವೆಂಬ ಹೊಸ ಪ್ರಕಾರವನ್ನೇ ಸಾಹಿತ್ಯ ಲೋಕಕ್ಕೆ ಅರ್ಪಿಸಿದ್ದಾರೆ. ನಾಡಿನ ಪ್ರಮುಖ ಪತ್ರಿಕೆಗಳ ಅಂಕಣಕಾರರಾಗಿ ಹೊಸಹೊಸ ವಿಚಾರಗಳನ್ನು ಬಹಿರಂಗಪಡಿಸಿದ್ದಾರೆ. ಮಾಧ್ವ ಸಾಹಿತ್ಯ ಪರಂಪರೆಗಾಗಲೀ ಕೀರ್ತನಾ ಜಗತ್ತಿಗಾಗಲೀ ಅವರು ನೀಡಿದ ಕೊಡುಗೆ ಅಪಾರ. ಹಿರಿ ತಲೆಮಾರಿನ ಹಲವಾರು ಸಾಹಿತಿಗಳ ಕೃತಿಗಳನ್ನು ಸಂಪಾದಿಸಿ ಅವುಗಳಿಗೆ ಮರುಜೀವ ನೀಡಿದ್ದಾರೆ.

ಕನ್ನಡ ಸಾಹಿತ್ಯ ಸಂಶೋಧನೆಗೆ ಕಂಪ್ಯೂಟರ್ ಸಹಾಯವಾಗಬಲ್ಲುದೆಂಬ ಮೂಲಭೂತ ತಿಳುವಳಿಕೆಯೂ ಇಲ್ಲದ ಕಾಲದಲ್ಲಿ ಕನ್ನಡಕ್ಕೇ ಮೊದಲಿಗರಾಗಿ ಸಂಶೋಧನೆಗೆ ಕಂಪ್ಯೂಟರ್ ಅಳವಡಿಸಿದ್ದಾರೆ. ಅವರ 'ಮುದ್ದಣ ಕಂಡ ಶಿವ' ಕನ್ನಡದ ಮೊದಲ ಕಂಪ್ಯೂಟರ್ ಆಧರಿತ ಸಂಶೋಧನ ಲೇಖನ. ಪುಣೆಯಲ್ಲಿ ಮರಾಠಿ– ಕನ್ನಡ ಸ್ನೇಹವರ್ಧಕ ಸಂಘವನ್ನು ಸ್ಥಾಪಿಸಿ ಕನ್ನಡದ ಕಂಪನ್ನು ಸಾಹಿತ್ಯದ ಮೂಲಕ, ಕಲಾತ್ಮಕ ಚಲನ ಚಿತ್ರಗಳ ಮೂಲಕ ಅಲ್ಲೂ ಹರಡಿದ್ದಾರೆ. ಮರಾಠಿಗರ ಬದುಕನ್ನು ಕುರಿತು ಹಲವು ಪ್ರಬಂಧಗಳನ್ನು ರಚಿಸಿ ಸಾಂಸ್ಕೃತಿಕವಾಗಿ ಕನ್ನಡದ ಜೊತೆಗೆ ಹೇಗೆ ತುಲನೆಯಾಗುತ್ತಾರೆ ಎಂಬುದನ್ನು ಬಯಲುಗೊಳಿಸಿದ್ದಾರೆ. 'ಹೊಸಗನ್ನಡ ಅರುಣೋದಯ'ವೆಂಬ ಅವರ ಸಂಶೋಧನ ಗ್ರಂಥ ಕನ್ನಡ ಸಾಹಿತ್ಯಲೋಕದ ಮೈಲಿಗಲ್ಲು. ಅದನ್ನು ಪರಿಶೀಲಿಸದೆ ಮುಂದಕ್ಕೆ ಹೋಗುವುದು ಕನ್ನಡ ಸಾಹಿತ್ಯ ಲೋಕದ ಸಂಶೋಧಕರಿಗೆ ಸುಲಭಸಾಧ್ಯವಲ್ಲ. ಸಂಶೋಧನೆಗೆ ಇನ್ನೊಂದು ಹೆಸರು ಡಾ. ಶ್ರೀನಿವಾಸ ಹಾವನೂರರು. 'ಹೊಸತು ಅಂತ ಏನಿದೆ, ಅದನ್ನಷ್ಟೆ ಹೇಳು.' ಇದು ಅವರ ಕೈಕೆಳಗೆ ನಾನು ಸಂಶೋಧನ ವಿದ್ಯಾರ್ಥಿಯಾಗಿ ಕೆಲಸಮಾಡುತ್ತಿದ್ದ ಸಂದರ್ಭದಲ್ಲಿ ಹೇಳಿಕೊಟ್ಟ ಕಿವಿಮಾತು. ಅವರ ಗುರುಗಳಾದ ರಂ.ಶ್ರೀ. ಮುಗಳಿಯವರು ಅವರಿಗೆ ಹೇಳಿ ಕೊಟ್ಟದ್ದಂತೆ. ಪರಿಣಾಮವಾಗಿ ಆರುನೂರು ಪುಟದ ಸಂಪ್ರಬಂಧವನ್ನು ಸಿದ್ಧಪಡಿಸಿದ್ದ ನಾನು ಅದನ್ನು ಹಿಗ್ಗಾಮುಗ್ಗಾ ಕತ್ತರಿಸಿ ಕೇವಲ ನೂರ ಎಂಬತ್ತು ಪುಟಕ್ಕೆ ಇಳಿಸಿಕೊಂಡೆ. 'ಇನ್ನೊಬ್ಬರ ಮಾತನ್ನು ನೀನು ಯಾಕೆ ಹೇಳ್ತಿ? ಅದು ಈಗಾಗಲೇ ಅವರ ಪುಸ್ತಕದಲ್ಲಿ ಬಂದು ಬಿಟ್ಟಿದೆಯಲ್ಲ!' ಎಂದು ಅವರು ಹೇಳುತ್ತಿದ್ದ ಮಾತುಗಳು ಮೊದಮೊದಲು ನನಗೆ ಅರ್ಥವಾಗುತ್ತಿರಲಿಲ್ಲ. ಇನ್ನೊಬ್ಬರ ಮಾತುಗಳನ್ನು ಪ್ರಶ್ನೆಯನ್ನಾಗಿಸಿ ಅದಕ್ಕೆ ಉತ್ತರ ಕಂಡುಕೊಳ್ಳುವುದೇ ಸಂಶೋಧನೆ ಎಂದು ತಿಳಿದಿದ್ದ ನಮಗೆ ಹಾವನೂರರು ನೀಡಿದ ಮಾರ್ಗದರ್ಶನ ಅಪರೂಪದ್ದು. ತಮ್ಮ ಮಕ್ಕಳ ಹಾಗೆ ನಮ್ಮನ್ನು ಅವರ ಮುಂಬಯಿಯ ಮನೆಯಲ್ಲಿ ಇರಿಸಿಕೊಂಡು ಸಂಶೋಧನೆ ಮುಂದುವರಿಸುವುದಕ್ಕೆ ಅನುವು ಮಾಡಿಕೊಟ್ಟದ್ದೊಂದು ಮರೆಯಲಾರದ ಅನುಭವ.

ಅವರು ಓದುವ ಹಾಗೂ ಬರೆಯುವ ಕ್ರಮವನ್ನು ನೋಡಿದ್ದೂ ಆ ಕಾಲಘಟ್ಟದಲ್ಲಿಯೆ. ಅದು ಭಿನ್ನ ಬಗೆಯದು. ಜಗವೆಲ್ಲ ಮಲಗಿರಲು ಅವರೊಬ್ಬರೆದ್ದು ಅಭ್ಯಾಸದಲ್ಲಿ ನಿರತರಾಗಿರುತ್ತಿದ್ದರು. ಜಗ ಎದ್ದಾಗ ಮಾತ್ರ ಇವರದ್ದೊಂದು ಕೋಳಿನಿದ್ದೆ! ನಿಜಕ್ಕೂ ಅವರು ಮಲಗುವುದ್ಯಾವಾಗ? ಅಭ್ಯಾಸ ಮಾಡುವುದು ಯಾವಾಗ ಎಂದು ಇದಮಿತ್ಥಂ ಆಗಿ ಹೇಳುವುದು ಅಸಾಧ್ಯ. ಕೆಲವೊಮ್ಮೆ ಮಧ್ಯರಾತ್ರಿಯಲ್ಲಿ ಎಚ್ಚರವಾಗಿ ಕಣ್ಣು ಬಿಟ್ಟು ನೋಡಿದರೆ ಗುರುಗಳು ಆ ಕಡೆಯ ಕೋಣೆಯಲ್ಲಿ ಸಣ್ಣಕೆ ಹಿಂದೂಸ್ತಾನಿ ಹಾಡಿನ ಕ್ಯಾಸೆಟ್ ಹಾಕಿ ಓದುವುದೋ ಬರೆಯುವುದೋ ಮಾಡುತ್ತಿದ್ದರು!

ಹಾವನೂರರಿಗೆ ಸಲ್ಲಬೇಕಾದಷ್ಟು ಗೌರವ ಸಲ್ಲಲಿಲ್ಲವೆಂಬ ಭಾವನೆ ನನ್ನನ್ನು ಯಾವಾಗಲೂ ಕಾಡಿದೆ. ಅದಕ್ಕೆ ಕಾರಣ ಹಲವು. ಎಳವೆಯಲ್ಲೇ ಮುಂಬಯಿ ಸೇರಿದ್ದ ಅವರು ಅಧ್ಯಾಪಕ, ಗ್ರಂಥಪಾಲ–ಹೀಗೆ ವಿವಿಧ ಕೆಲಸಗಳಲ್ಲಿದ್ದು ಪಿಹೆಚ್.ಡಿ. ಮುಗಿಯುವ ವರೆಗೂ ಕರ್ನಾಟಕದ ಕಣ್ಣಿಗೆ ಅಷ್ಟಾಗಿ ಬೀಳಲಿಲ್ಲ. ಆ ಬಳಿಕ ಮಂಗಳೂರು

ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಎರಡು ವರ್ಷವಿದ್ದರೂ ರಾಜಧಾನಿಯ ಸಂಪರ್ಕಕ್ಕೆ ಹೊರತಾಗಿದ್ದರು. ಮತ್ತೆಯೂ ಅವರು ಹೋದದ್ದು ಮುಂಬಯಿಗೇ. ಅಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ದುಡಿದರು. ನಿವೃತ್ತಿಯಾದ ಬಳಿಕ ಅವರ ನಿಜದ ನೆಲೆ ಎಲ್ಲಿ ಎಂಬುದರ ಬಗ್ಗೆ ಅವರಿಗೇ ಗೊಂದಲವಿತ್ತು. ಹಾಗಾಗಿ ಕೆಲವರ್ಷ ಪುಣೆಯಲ್ಲಿ ಕಳೆದರು ಮತ್ತೆ ಬೆಂಗಳೂರಿಗೆ ಬಂದು ವಾಸ್ತವ್ಯ ಪ್ರಾರಂಭಿಸಿದರೂ ಅವರಿಗದು ಹಿತವೆನ್ನಿಸಲಿಲ್ಲ. ಮತ್ತೆ ಮಂಗಳೂರಿನ ಬಾಸೆಲ್ ಮಿಶನ್ ಸಂಸ್ಥೆಯಲ್ಲಿ ತಮ್ಮ ವಾಸ್ತವ್ಯವನ್ನೂ ಸಂಶೋಧನೆಯನ್ನೂ ಮುಂದುವರಿಸಿದರು. ಅದಾದ ಬಳಿಕ ಕೊನೆಗೂ ಬೆಂಗಳೂರೇ ಗತಿಯೆಂದು ಅಲ್ಲಿಗೆ ಹೊರಟುಹೋದರು.

ಇಷ್ಟೆಲ್ಲ ತಿರುಗಾಟದ ನಡುವೆ ತಮ್ಮ ಸಂಶೋಧನೆಗೆ ಮಾತ್ರ ಎಳ್ಳಷ್ಟು ಬಿಡುವು ಕೊಟ್ಟಿರಲಿಲ್ಲ. ಆದರೆ ಹಾವನೂರರ ಸಂಶೋಧನೆಯ ಮಹತ್ವ ಯಾರಿಗೆ ವಾಸ್ತವವಾಗಿ ಗೊತ್ತಾಗಬೇಕಿತ್ತೋ ಅವರಿಗೆ ಗೊತ್ತಾಗಲಿಲ್ಲ. ಅಧ್ಯಾಪಕರಾಗಿ ಅವರು ಕಾಣಿಸಿಕೊಂಡದ್ದು ಕೇವಲ ಕೆಲವೇ ವರ್ಷಗಳು. ಹಾಗಾಗಿ ಅವರ ಶಿಷ್ಯ ಬಳಗ ಬಹು ಕಿರಿದು. ಆದರೆ ಹಾವನೂರರ ದೈತ್ಯ ಪ್ರತಿಭೆ ಗೊತ್ತಿದ್ದವರಿಗೆ ಗೊತ್ತು. ಮಂಗಳೂರು ಹಾಗೂ ಬೆಂಗಳೂರು ವಿಶ್ವವಿದ್ಯಾಲಯ ಗಳಲ್ಲಿ ಅವರು ಮಾಡಿದ ಕೆಲಸಗಳನ್ನು ಎರಡೂ ವಿಭಾಗಗಳು ಮರೆಯುವಂತಿಲ್ಲ. ವಿಭಾಗಗಳಿಗೆ ಅವರು ಸಂಗ್ರಹಿಸಿಕೊಟ್ಟ ಪುಸ್ತಕಗಳು, ವಸ್ತುಗಳು ಇಂದಿಗೂ ಅವರನ್ನು ನೆನೆಯುತ್ತಿವೆ.

ಅವರ ಅಭಿನಂದನ ಗ್ರಂಥ 'ಸಂಕಥನ' ಹೊರಬರುವ ಹೊತ್ತಿಗೂ ಜಟಿಲವಾದ ಪ್ರಶ್ನೆಯೊಂದು ನಮ್ಮನ್ನು ಕಾಡಿತ್ತು. ಈ ಸಮಾರಂಭವನ್ನು ಏರ್ಪಡಿಸಬೇಕಾದವರು ಮಂಗಳೂರಿನವರೇ, ಬೆಂಗಳೂರಿನವರೇ, ಪುಣೆಯವರೇ ಅಥವಾ ಮುಂಬಯಿ ಯವರೇ? ಕೊನೆಗೂ ಮಂಗಳೂರಿನ ಗೆಳೆಯರು ಸೇರಿಕೊಂಡು ಬೆಂಗಳೂರಿನಲ್ಲಿ ಅಭಿನಂದನ ಸಮಾರಂಭವೇರ್ಪಡಿಸಿದ್ದೊಂದು ಧನ್ಯತೆಯ ಕ್ಷಣ. ಹಾವನೂರರು ಸ್ಥಾವರರಲ್ಲ, ಜಂಗಮರು. ಪ್ರಶಸ್ತಿ, ಬಿರುದುಗಳಿಗಿಂತ 'ಜಂಗಮಕ್ಕಳಿವಿಲ್ಲ' ಎಂಬುದು ಹಾವನೂರರ ಪಾಲಿಗೆ ಬಹಳ ಮುಖ್ಯವಾದದ್ದು.

ಹಾಗಾಗಿಯೇ ರವೀಂದ್ರ ಶೆಟ್ಟರು ಹಾವನೂರರ ಬದುಕು– ಬರೆಹಗಳನ್ನು ಕುರಿತು ಸಂಶೋಧನೆ ಮಾಡುವ ಬಗ್ಗೆ ಒಲವು ತೋರಿಸಿದಾಗ ನಾನು ಹೂಂಗುಟ್ಟಿದ್ದು. ಹಾವನೂರರು ಎಂ.ಫಿಲ್. ವ್ಯಾಪ್ತಿಗೆ ನಿಲುಕುವವರಲ್ಲ; ಅವರ ಕುರಿತು ಹಲವು ಪಿಹೆಚ್.ಡಿ. ಸಂಪ್ರಬಂಧಗಳು ಬರಬೇಕಾದ್ದಿವೆ. ರವೀಂದ್ರ ಶೆಟ್ಟಿಯವರು ತಾವು ಮಾಡುವಷ್ಟು ಕೆಲಸವನ್ನು ಚೊಕ್ಕವಾಗಿ ಮಾಡಿದ್ದಾರೆ. ಮುಂದೆ ಅವರಾಗಲೀ ಇನ್ಯಾರೇ ಆಗಲೀ ಸಂಶೋಧನೆ ಮುಂದುವರಿಸು ವುದಿದ್ದಲ್ಲಿ ಇದೂ ಒಂದು ಆಕರ ಗ್ರಂಥವಾಗಬಲ್ಲುದು ಎಂಬುದರ ಬಗ್ಗೆ ಯಾವ ಸಂದೇಹವೂ ಇಲ್ಲ.

ಬೆಂಗಳೂರು
12 ಅಗೋಸ್ತು 2013

ನಾ. ದಾಮೋದರ ಶೆಟ್ಟಿ

## ಮನದಾಳದ ಮಾತು

ಜೀವನದ ಹಸಿರು ಹುಡುಕಿ ನಗರ ಸೇರಿ, ಅಧ್ಯಾಪನ ವೃತ್ತಿಯನ್ನಾಂತು ಸಾಗುತ್ತಿದ್ದಂತೆ ನನ್ನೊಳಗಿನ ಚಡಪಡಿಕೆ ಇನ್ನಷ್ಟು ತೀವ್ರತೆಯನ್ನು ಪಡೆಯಿತು. ಅದು ನನ್ನನ್ನು ನಾನು ಕಂಡುಕೊಳ್ಳುವ ಮತ್ತು ಕಾಣಿಸುವ ಹಪಹಪಿಕೆ. ಈ ನೆಲೆಯಲ್ಲಿಯೇ ಕನ್ನಡದಲ್ಲಿ ಉನ್ನತ ವ್ಯಾಸಂಗವನ್ನು ಪಡೆದು ಇನ್ನೇನು ಎಂದು ಯೋಚಿಸುತ್ತಿರುವಂತೆಯೇ ಹಿರಿಯ ಸಹೋದ್ಯೋಗಿ ಗುರುಸಮಾನರಾದ ಬೈಕಾಡಿ ಜನಾರ್ದನ ಆಚಾರ್ಯರು ನೀವ್ಯಾಕೆ ಎಂ.ಫಿಲ್ ಮಾಡಬಾರದು? ಎಂದು ಕೇಳಿದ್ದಲ್ಲದೆ 'ಸಹೋದಯ'ದ ಕಡೆಗೆ ಬೆರಳು ತೋರಿದರು. ಹೀಗೆ ಉತ್ತೇಜಿತನಾಗಿ ಆ ಕಡೆಗೆ ಹೆಜ್ಜೆ ಹಾಕಿ ಕನ್ನಡ ವಿಶ್ವವಿದ್ಯಾಲಯ ಹಂಪಿ ಇದರ ಸಂಯೋಜಕರಾದ ಪ್ರೊ. ಎ.ವಿ. ನಾವಡರನ್ನು ಕಂಡು ಹೆಚ್ಚಿನ ಮಾಹಿತಿಯನ್ನು ಕಲೆಹಾಕಿದೆ. ನಾವಡರು ಆ ದಿನ ನನ್ನನ್ನು ಬರಮಾಡಿ ಆತ್ಮೀಯತೆಯಿಂದ ನೀಡಿದ ಸಮಗ್ರ ಮಾಹಿತಿ ಮತ್ತು ಪ್ರೋತ್ಸಾಹ ಈ ಪದವಿಯನ್ನು ಪಡೆಯುವ ನನ್ನ ನಿರ್ಧಾರವನ್ನು ಇನ್ನಷ್ಟು ಗಟ್ಟಿಗೊಳಿಸಿತು.

ನನ್ನ ಮನೋವಲಯದಲ್ಲಿ ತಿರುಗುತ್ತಿದ್ದ ನಾಲ್ಕಾರು ವಿಷಯಗಳಲ್ಲಿ ಡಾ। ಹಾವನೂರರ ಸಂಶೋಧನೆ ನನಗೆ ಹೆಚ್ಚು ಆಪ್ತವಾಯಿತು. ಉತ್ತರ ಕರ್ನಾಟಕದ ಹಳ್ಳಿಯ ಬಡಕುಟುಂಬದಲ್ಲಿ ಹುಟ್ಟಿದ ಹಾವನೂರರು ಕಷ್ಟಕರವಾದ ಬದುಕನ್ನು ಎದುರ್ಗೊಂಡರೂ ಇಚ್ಛಾಶಕ್ತಿಯ ಬಲದಿಂದ ಮೇಲೆದ್ದು ಬಂದ ಬಗೆ ಹಾಗೂ ಮಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದಾಗ, ಸಂಶೋಧನಾ ಪ್ರಕ್ರಿಯೆಗೆ ಸೂಕ್ತ ತಳಹದಿಯನ್ನು ರೂಪಿಸುವುದರೊಂದಿಗೆ ದ.ಕ. ಜಿಲ್ಲೆಯ ಸಾಂಸ್ಕೃತಿಕ ಅವಶೇಷಗಳನ್ನು ಹುಡುಕಿ ನಾಡಿನಾದ್ಯಂತ ಸಂಚರಿಸಿ ಕನ್ನಡ ವಿಭಾಗವನ್ನು ಕಟ್ಟಿದ ಮಾಹಿತಿ ನನ್ನಲ್ಲಿ ಬೆಚ್ಚಗಿನ ಅನುಭವವನ್ನುಂಟು ಮಾಡಿತು. ಆದರೆ ಕನ್ನಡದ ಈ ಸಾಧಕನ ಬಗ್ಗೆ ಹೆಚ್ಚಿನ ಕೆಲಸ ನಡೆದಿಲ್ಲದಿರುವುದು ನನ್ನನ್ನು ಈ ಕಡೆಗೆ ಹೆಚ್ಚು ಸೆಳೆಯಿತು. ಎಲೆಮರೆಯ ಕಾಯಾಗಿ ದುಡಿದು, ತನ್ನ ಜೀವನದ ಬಹು ಭಾಗವನ್ನು ಸಂಶೋಧನೆಯಲ್ಲಿಯೇ ಕಳೆದು, ಸಂಶೋಧನಾ ಲೋಕಕ್ಕೆ ಹೊಸ ಭಾಷ್ಯ ಬರೆದು ಕನ್ನಡದ ಕ್ಷಿತಿಜವನ್ನು ವಿಸ್ತರಿಸಿದ ಹಾವನೂರರು ನನ್ನ ಸಹಜ ಕುತೂಹಲದ ಭಾಗವಾದರು.

ಅಧ್ಯಾಪಕ–ಪ್ರಾಧ್ಯಾಪಕರಾಗಿ, ಗ್ರಂಥಪಾಲಕರಾಗಿ, ಸಂಶೋಧಕರಾಗಿ,

ಸಾಹಿತಿಯಾಗಿ, ಡಾ। ಹಾವನೂರರ ಸಿದ್ಧಿ ಸಾಧನೆಗಳನ್ನು ದೂರ ತೀರದಿಂದ ನಿಂತು ನೋಡುವುದೇ ಒಂದು ಸಾಹಸ; ಇನ್ನು ಅದರೊಳಗಿಳಿದು, ಅದರ ಆಳ–ಅಗಲ–ವಿಸ್ತಾರ–ವೈವಿಧ್ಯಗಳನ್ನು ಕಂಡುಕೊಂಡಿದ್ದೇನೆ ಎನ್ನುವುದು ಉತ್ಪ್ರೇಕ್ಷೆಯಾದೀತು. ನನ್ನ ಈ ಪ್ರಬಂಧವೇನಿದ್ದರೂ ಸಾಗರದಿಂದಾಯ್ದ ಕೊಡನೀರು ಎಂದು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತೇನೆ.

ನನ್ನ ಹಾದಿಗೆ ಕೈದೀವಿಗೆ ಹಿಡಿದು 'ಮಾರ್ಗದರ್ಶಕ'ರಾಗಿ ಜತನದಿಂದ ಮುನ್ನಡೆಸಿದವರು ಪ್ರಾಧ್ಯಾಪಕರಾಗಿ, ಸಾಹಿತಿಯಾಗಿ, ರಂಗಕರ್ಮಿಯಾಗಿ ಹಿರಿತನ ಪಡೆದ ಡಾ। ನಾ. ದಾಮೋದರ ಶೆಟ್ಟಿಯವರು. ನಾ.ದಾ.ರನ್ನು ನಾನು ಹತ್ತಿರದಿಂದ ಕಂಡಿದ್ದೆ, ಕೇಳಿದ್ದೆನಾದರೂ ಅವರಿಗೆ ನಾನು ತೀರಾ ಅಪರಿಚಿತ. ಆದರೆ ಮೊದಲ ಭೇಟಿಯಲ್ಲೇ ಬಹುಕಾಲದ ಬಾಂಧವ್ಯದ ಅನುಭವವಾಯಿತು. ಅವರ 'ಶಿಷ್ಯ ವಾತ್ಸಲ್ಯ'ದ ಪರಿಚಯವಾಗಿ, ಮನದ ಹಿಂಜರಿಕೆ ದೂರವಾಗಿ, ಸಾಗಬೇಕಾದ ದಾರಿ ಹತ್ತಿರವಾಯಿತು.

ಕನ್ನಡದ ಬೆಳೆಯನ್ನೇ ಉಸಿರಾಗಿಸಿರುವ ನಾಡಿನ ಹೆಮ್ಮೆಯ ಕನ್ನಡ ವಿಶ್ವವಿದ್ಯಾಲಯ, ಹಂಪಿ ಹಾಗೂ ಜ್ಞಾನಾರ್ಥಿಗಳಿಗೆ ತೆರೆದ ಬಾಗಿಲಾಗಿರುವ ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರ, ಮಂಗಳೂರು ಇದರ ಭಾಗವಾಗಿ ನನ್ನ ಪದವಿಯನ್ನು ಪಡೆದದ್ದು ನನಗೆ ಹೆಮ್ಮೆ ಎನಿಸುತ್ತಿದೆ. ಇದಕ್ಕೆ ಅನುವು ಮಾಡಿಕೊಟ್ಟ ಕೇಂದ್ರದ ನಿರ್ದೇಶಕರು ಹಾಗೂ ಪ್ರಾಧ್ಯಾಪಕರಾದ ಡಾ। ರತ್ನಾಕರ ಸದಾನಂದಯ್ಯರನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಈ ಪುಟ್ಟ ಕೃತಿಯನ್ನು ಪ್ರಕಟಿಸುವುದಕ್ಕೆ ಧನಸಹಾಯವನ್ನಿತ್ತ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ನಾನು ಆಭಾರಿ. ಇದು ಪ್ರಕಟಣೆಗೊಳ್ಳುವಲ್ಲಿ ನನಗಿಂತಲೂ ಹೆಚ್ಚು ಆಸ್ಥೆ ವಹಿಸಿದ ಗುರುಗಳಾದ ಪ್ರೊ. ಎ.ವಿ ನಾವಡರನ್ನು ಗೌರವಪೂರ್ವಕವಾಗಿ ನೆನಪು ಮಾಡಿಕೊಳ್ಳುತ್ತೇನೆ. ಹೆಜ್ಜೆ ಹೆಜ್ಜೆಗೂ ಸಲಹೆ ಸೂಚನೆಗಳನ್ನಿತ್ತು ಮುನ್ನಡೆಸಿ, ಮುನ್ನುಡಿಯಿತ್ತು ಹರಸಿದ ಡಾ। ನಾ.ದಾ. ಶೆಟ್ಟಿಯವರಿಗೆ ಶಿರಸಾ ನಮನ.

ನಿರಂತರ ಅಧ್ಯಯನವೇ ಅಧ್ಯಾಪಕನ ಮನೋಧರ್ಮ. ನನ್ನ ಹೆಚ್ಚಿನ ಕಲಿಕೆಗೆ ಅವಕಾಶವನ್ನೊದಗಿಸಿದ ಕೆನರಾ ಹೈಸ್ಕೂಲ್ ಅಸೋಸಿಯೇಶನ್‌ಗೆ ನಾನು ಆಭಾರಿ. ಬೆಂಬಲಿಸಿದ ಕೆನರಾ ಹೈಸ್ಕೂಲ್ ಉರ್ವದ ಮುಖ್ಯೋಪಾಧ್ಯಾಯರಾದ ಶ್ರೀ ಟಿ. ಜಿ. ಅಶೋಕ್ ಪಂಡಿತ್‌ರನ್ನು ಸ್ಮರಿಸುತ್ತೇನೆ. ಬೆನ್ನುತಟ್ಟಿ ಪ್ರೋತ್ಸಾಹಿಸಿದ ಸಹೋದ್ಯೋಗಿ ಮಿತ್ರರಿಗೆ ಸಪ್ರೇಮ ನಮನ. ಸುಂದರವಾದ ಮುಖಪುಟವನ್ನು ರಚಿಸಿದ ಖ್ಯಾತ ಕಲಾವಿದ, ಹಿರಿಯ ಸಹೋದ್ಯೋಗಿ ಮಿತ್ರ ಪೆರ್ಮುದೆ ಮೋಹನ್‌ಕುಮಾರ್ ಇವರಿಗೆ ಪ್ರೀತಿಯ ನಮನಗಳು. ಅಂದವಾಗಿ ಮುದ್ರಿಸಿದ ಆಕೃತಿ ಪ್ರಿಂಟ್ಸ್‌ಗೆ ವಂದನೆಗಳು.

ಜಗದ ಬೆಳಕು ನೀಡಿದ ಅಪ್ಪ – ಅಮ್ಮ; ತಿದ್ದಿ ತೀಡಿ ಬುದ್ಧಿ ಭಾವ ಬೆಳೆಸಿದ ಅಣ್ಣಂದಿರು – ಅಕ್ಕಂದಿರು ಹಾಗೂ ಬದುಕು ಬೆಸೆದ ಬಾಳಸಂಗಾತಿ ನನ್ನ ಸ್ಫೂರ್ತಿ.

ಬಾಕ್ರಬೈಲ್
21 ಅಗೋಸ್ತು 2013

**ರವೀಂದ್ರನಾಥ ಶೆಟ್ಟಿ ಕರ್ಪಿಕಾರ್**

## ಪರಿವಿಡಿ

# ಪ್ರವೇಶ

ಡಾ। ಶ್ರೀನಿವಾಸ ಹಾವನೂರರು ಕನ್ನಡ ಸಾರಸ್ವತ ಲೋಕದ ದೈತ್ಯ ಪ್ರತಿಭೆ. ಶ್ರೀಯುತರು ಕಥೆಗಾರರಾಗಿ, ಪ್ರಬಂಧಕಾರರಾಗಿ ಗುರುತಿಸಿಕೊಂಡರೂ ಒಂದು ತೂಕ ಹೆಚ್ಚಾಗಿ ಅವರನ್ನು ಎಲ್ಲರೂ ಗುರುತಿಸುವುದು ಸಂಶೋಧಕರಾಗಿ.

ತುಂಗಾಭದ್ರಾ ತೀರದ ಹಾವನೂರಿನ ಅಪ್ಪಟ ಧಾರ್ಮಿಕ ವಾತಾವರಣದಲ್ಲಿ ನರಸಿಂಹಾಚಾರ್ಯ ಹಾಗೂ ರಮಾಬಾಯಿಯವರ ಹಿರಿಯ ಮಗನಾಗಿ ಡಿಸೆಂಬರ್ ೨೮, ೧೯೨೭ರಲ್ಲಿ ಜನಿಸಿದ ಹಾವನೂರರು ಜೀವನದಲ್ಲಿ ವಿಶಾಲವಾದ ಅನುಭವವನ್ನು ಪಡೆದವರು. ಇದಕ್ಕೆ ಅವರ ಬಹುಮುಖಿ ಉದ್ಯೋಗ ಕ್ಷೇತ್ರವೂ ಕಾರಣವಾಗಿದೆ. ಶಾಲಾಮಾಸ್ತರರಾಗಿ, ಇಂಗ್ಲೀಷ್ ಟ್ಯೂಟರ್ ಆಗಿ, ಆಕಾಶವಾಣಿಯಲ್ಲಿ ಕನ್ನಡ ಅಸಿಸ್ಟೆಂಟ್ ಆಗಿ, ಮಾರಾಟ ತೆರಿಗೆ ಇಲಾಖೆಯಲ್ಲಿ ಇನ್ಸ್‌ಪೆಕ್ಟರ್ ಆಗಿ, ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಟಾಟಾ ವಿಜ್ಞಾನ ಸಂಸ್ಥೆಯಲ್ಲಿ ಗ್ರಂಥಪಾಲಕರಾಗಿ, ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ ಮತ್ತು ಮುಂಬಯಿ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಹೀಗೆ ವಿವಿಧ ವೃತ್ತಿರಂಗದಲ್ಲಿ ದುಡಿದು ಜೀವನಾನುಭವವನ್ನು ಪಕ್ವಗೊಳಿಸಿಕೊಂಡವರು.

ಡಾ। ಹಾವನೂರರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ೬೦ಕ್ಕೂ ಮಿಕ್ಕಿದ ಕೃತಿಗಳನ್ನರ್ಪಿಸಿದ್ದಲ್ಲದೆ ಇಂಗ್ಲೀಷ್ ಸಾಹಿತ್ಯದಲ್ಲೂ ಕೈಯಾಡಿಸಿದ್ದಾರೆ. ಸಣ್ಣಕತೆ, ಲಲಿತಪ್ರಬಂಧ, ಕಾದಂ-ಕಥನ, ಸಾಹಿತ್ಯ ಚರಿತ್ರೆ, ಇತಿಹಾಸ ಸಂಶೋಧನೆ, ಸಾಹಿತ್ಯ ವಿಮರ್ಶೆ, ಜೀವನ ಚಿತ್ರಣ, ಧಾರ್ಮಿಕ ವಿಚಾರ, ಪುಸ್ತಕೋದ್ಯಮ, ಪತ್ರಿಕೋದ್ಯಮ, ಶಾಸ್ತ್ರವಾಙ್ಮಯ, ವಿಚಾರ ಜಿಜ್ಞಾಸೆ, ಸಂಸ್ಕೃತಿ ಪರಿಚಯ ಇತ್ಯಾದಿ ಪ್ರಕಾರಗಳಲ್ಲಿ ಇವರ ಪ್ರತಿಭೆ ಪಡಿಮೂಡಿದೆ. ಇವೆಲ್ಲದಕ್ಕೂ ಕಲಶಪ್ರಾಯವಾಗಿ ಹಾವನೂರರ ಶಕ್ತಿ, ಸಾಮರ್ಥ್ಯ, ಪ್ರತಿಭೆ ಅನಾವರಣಗೊಂಡದ್ದು ಪೂನಾ ವಿಶ್ವವಿದ್ಯಾನಿಲಯದಿಂದ ಅವರಿಗೆ ಪಿಎಚ್.ಡಿ ಪದವಿಯನ್ನು ದೊರಕಿಸಿಕೊಟ್ಟ ಮೌಲಿಕ ನಿಬಂಧ 'ಹೊಸಗನ್ನಡದ ಅರುಣೋದಯ'ದ ಮೂಲಕ. ಇದು ಹತ್ತೊಂಬತ್ತನೆಯ ಶತಮಾನದ ಸಾಹಿತ್ಯ ಚಟುವಟಿಕೆಗಳ ಸಮಗ್ರ ಚಿತ್ರಣವನ್ನೊದಗಿಸುವ

ಸಂಶೋಧನಾತ್ಮಕ ಕೃತಿ. ಇದರ ಹಿಂದಿನ ಮತ್ತು ಮುಂದಿನ ಶತಮಾನಗಳ ಸಾಹಿತ್ಯ ರಚಿತವಾಗಿದ್ದರೂ, ಕ್ಲಿಷ್ಟಕರವಾದ ಈ ಕಾಲವನ್ನು ಮುಟ್ಟುವ ಧೈರ್ಯವನ್ನು ಯಾರೂ ಮಾಡಿರಲಿಲ್ಲ. ಡಾ ಹಾವನೂರರು ಇದನ್ನು ಅತ್ಯಂತ ಯಶಸ್ವಿಯಾಗಿ ಪೂರೈಸಿ ಕನ್ನಡ ಸಾಹಿತ್ಯ ವಲಯದಲ್ಲಿ ಅಪಾರವಾದ ಮನ್ನಣೆಯನ್ನು ಪಡೆದರು.ಡಾ। ಹಾವನೂರರು ಎದುರ್ಗೊಂಡ ಬದುಕು ಅವರನ್ನು ಈ ಎತ್ತರಕ್ಕೆ ಏರಿಸಿರಬಹುದು. ಇವರು ಹುಟ್ಟಿದ್ದು ಹದಿನಾಲ್ಕು ಮಕ್ಕಳಿರುವ ಬಡ ಬ್ರಾಹ್ಮಣ ಕುಟುಂಬದ ಹಿರಿಯವನಾಗಿ. ತಂದೆ ನರಸಿಂಹಾಚಾರ್ಯರು ಇಷ್ಟು ದೊಡ್ಡ ಸಂಸಾರದ ಹೊರೆಯನ್ನು ನಿಭಾಯಿಸುವಲ್ಲಿ ಹೈರಾಣಾಗಿದ್ದರು. ಆದರೂ ಹಾವನೂರರು ಏನಾದರೂ ಸಾಧಿಸಲೇಬೇಕು ಎಂಬ ಇಚ್ಛಾಶಕ್ತಿ ಬಲವತ್ತರವಾಗಿದ್ದುದರಿಂದ ಕುಟುಂಬದ ಕಷ್ಟವನ್ನು ಈಸಿ ಜಯಿಸಿದರು. ಸಂಶೋಧನಾ ಕ್ಷೇತ್ರದಲ್ಲಿ ಬೆಳಗುವ ನಕ್ಷತ್ರವಾದರು. ಹಾಗೆಂದು ಇನ್ನೂ ಹಿಂದಕ್ಕೆ ದೃಷ್ಟಿ ಹಾಯಿಸಿದರೆ ಇವರದ್ದು ಪಂಡಿತ ಪರಂಪರೆ. ಹೆಸರುವಾಸಿಯಾದ ಪ್ರಸಿದ್ಧ 'ಗಲಗಲಿ' ಮನೆತನ. ಇದರ ಮೂಲ ಪುರುಷರಾದ ಮುದ್ಗಲಾಚಾರ್ಯರ ಕಾಲದಿಂದಲೇ ಈ ವಂಶದ ಪಾಂಡಿತ್ಯ ಜನಜನಿತವಾಗಿದ್ದು, ಮುದ್ಗಲಾಚಾರ್ಯರ ಪತ್ನಿ ಗಲಗಲಿ ಅವ್ವನವರು ಪ್ರಥಮ ಮಹಿಳಾ ದಾಸರೆನಿಸಿಕೊಂಡಿದ್ದಾರೆ. ಇನ್ನು ಹಾವನೂರರ ಮುತ್ತಜ್ಜನ ಪಾಂಡಿತ್ಯಕ್ಕೆ ಮಾರುಹೋದ ದೂರದ ಜಮಖಂಡಿಯವರೊಬ್ಬರು, ಆಚಂದ್ರಾರ್ಕವಾಗಿ ಭೋಗಿಸಲೆಂದು ಜಮೀನೊಂದನ್ನು ದಾನವಾಗಿ ನೀಡಿದ್ದರಂತೆ. ಅಜ್ಜ ವ್ಯಾಕರಣ ಶಾಸ್ತ್ರ ಕೋವಿದರಾಗಿದ್ದರು. ಈ ಪಂಡಿತ ಪರಂಪರೆ ವಂಶವಾಹಿನಿಯಾಗಿ ಹಾವನೂರರನ್ನು ಸೇರಿಕೊಂಡಿರಬಹುದು. ವ್ಯತ್ಯಾಸವೆಂದರೆ ಇತರರು ಪಂಡಿತರಾದರೆ ಹಾವನೂರರು ಸಂಶೋಧಕರಾದರು.

ಡಾ.ಹಾವನೂರರ ಶಾಲಾ ಶಿಕ್ಷಣ ವಾರಾನ್ನದಿಂದ ಪೂರ್ಣವಾಗಿತ್ತು. ಒಮ್ಮೆ ಶಾಲಾ ಫೀಸು ಕಟ್ಟದೆ ಶಾಲೆಯಿಂದ ಹೆಸರು ತೆಗೆದ ಪ್ರಸಂಗ ಒದಗಿತು. ಆಗ ಕಿಟಕಿಯ ಹೊರಗಿ ನಿಂದ ಪಾಠ ಕೇಳಿಸಿಕೊಂಡು ಅಭ್ಯಾಸ ಮುಂದುವರಿಸಿದ್ದಲ್ಲದೆ, ಅದೇ ಕಾಲದಲ್ಲಿ "ಹೊಟೇಲಿನ ಪ್ರಭಾವ" ಎಂಬ ಕತೆಯನ್ನೂ ಬರೆದಿದ್ದರು. ಅದು ಶಾಲೆಯ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವೂ ಆಗಿತ್ತು. ಇದು ಪ್ರವಾಹದ ವಿರುದ್ಧವಾಗಿ ಈಜುವ ಹಾವನೂರರ ಕೆಚ್ಚೆದೆಯನ್ನು ನಿದರ್ಶಿಸುತ್ತಿದೆಯಲ್ಲದೆ ಬಾಲ್ಯದಲ್ಲಿಯೇ ಅವರಲ್ಲಿದ್ದ ಜ್ಞಾನದ ಹಸಿವನ್ನು, ಸಾಧನೆಯ ಹಂಬಲವನ್ನು ಎತ್ತಿ ಹಿಡಿಯುತ್ತದೆ.

ಮಗುವಿನ ಸರ್ವಾಂಗೀಣ ವಿಕಾಸದಲ್ಲಿ, ಭವಿಷ್ಯ ನಿರ್ಮಾಣದಲ್ಲಿ ಶಿಕ್ಷಕರ ಪಾತ್ರ ಪ್ರಧಾನವಾಗಿರುತ್ತದೆ ಎಂಬ ಮಾತು ಹಾವನೂರರ ಬದುಕಿನಲ್ಲಿಯೂ ಸತ್ಯವಾಗಿತ್ತು. ಕರ್ನಾಟಕ ಹೈಸ್ಕೂಲಿನ ಶಿಕ್ಷಕರಾದ ಎಸ್. ಪಿ ಕುಲಕರ್ಣಿ ಮತ್ತು ರಂಗನಾಥ ನೆಗಳೂರು ಎಂಬ ಶಿಕ್ಷಕದ್ವಯರು ಹಾವನೂರರ ಸಾಹಿತ್ಯಾಭಿರುಚಿಯನ್ನು ಉದ್ದೀಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಡಾ। ಹಾವನೂರರು ಹಗಲಿಡೀ ಅನ್ನ ಹಾಕಿದವರ ಮನೆಯ ಕೆಲಸ ಮಾಡಿ, ಮೆಟ್ರಿಕ್ ಪರೀಕ್ಷೆ ಪಾಸು ಮಾಡಬೇಕಾದ ಕಠಿಣ ಪರಿಸ್ಥಿತಿಯನ್ನು ಸವಾಲಾಗಿ ಸ್ವೀಕರಿಸಿ ಬದುಕಿನಲ್ಲೊಂದು ಹೊಸ ಶಿಸ್ತನ್ನು ಮೈಗೂಡಿಸಿಕೊಂಡರು. ಓದುವಿಕೆಗೆ

ಸಮಯ ಹೊಂದಾಣಿಕೆ ಮಾಡುವುದು ಅನಿವಾರ್ಯ ಎಂದಾಗ ರಾತ್ರಿ ಮೂರು ತಾಸು ಮಲಗಿ ಬಳಿಕ ಎಚ್ಚರಗೊಳ್ಳುವ, ಓದುವ ನಿರ್ಧಾರಕ್ಕೆ ಬಂದರು. ಹತ್ತಿರದ ಹೋಟೇಲಿನಲ್ಲಿ ಭಜಿ ಮಾಡಿದ್ದರ ಪುಡಿಗಾಳು ಎರಡು ಬಿಲ್ಲೆಗೆ ಬೊಗಸೆ ತುಂಬಾ ಸಿಗುತ್ತಿತ್ತು. ಅದನ್ನು ತಿಂದು ನೀರು ಕುಡಿದು ಮಲಗಿದವರನ್ನು ಮನಸ್ಸಿನೊಳಗಿನ ಗಡಿಯಾರ ಮೂರೇ ತಾಸಿನಲ್ಲಿ ಎಬ್ಬಿಸುತ್ತಿತ್ತು. ಈ ಅಭ್ಯಾಸ ಮುಂದೆ ಜೀವನ ಪರ್ಯಂತ ಹಾವನೂರರ ಸಮಸ್ತ ಸಾಧನೆಯ ಬೆಂಗಾವಲಾಗಿತ್ತು.

ಕಾಲೇಜು ಶಿಕ್ಷಣವನ್ನು ಪಡೆಯಲೇಬೇಕೆಂಬ ಬಲವಾದ ತುಡಿತ, ಹಂಬಲವಿದ್ದರೂ ಆರ್ಥಿಕ ಬೆಂಬಲವಿರಲಿಲ್ಲ. ಇದಕ್ಕಾಗಿ ಅವರಿವರಲ್ಲಿ ಕಾಡಿ ಬೇಡಬೇಕಾದ ದಯನೀಯತೆಯನ್ನು ಎದುರಿಸಿದ್ದರು. ಹಲವೆಡೆ ಮುಖಭಂಗಕ್ಕೂ ಒಳಗಾದರು. ಆದರೂ ಜ್ಞಾನದಾಹ ಅವರನ್ನು ಕರ್ನಾಟಕ ಕಾಲೇಜನ್ನು ಸೇರಿಸಿತು. ಅಲ್ಲಿ ಶ್ರೀರಂಗರ ಸಹಕಾರದಿಂದ ಗಳಿಕೆಯೊಂದಿಗೆ ಕಲಿಕೆಯನ್ನು ಮುಂದುವರಿಸುವ ಅವಕಾಶ ಲಭ್ಯವಾಯಿತು. ವಿದ್ಯಾವರ್ಧಕ ಸಂಘದ ಲೈಬ್ರರಿಯಲ್ಲಿ ೨೫ ರೂ ಸಂಬಳಕ್ಕೆ ದುಡಿಯುವ ಅವಕಾಶವನ್ನೊದಗಿಸಿದರು. ಅದು ಪುಸ್ತಕಪ್ರೇಮಿಯಾದ ಹಾವನೂರರಿಗೆ ನಿದ್ದೆಯವನ್ನು ಹಾಸಿಗೆಗೆ ದೂಡಿದ ಸ್ಥಿತಿಯಾಯಿತು. ಮುಂದೆ ಅವರ ಸಂಬಳ ೪೦ ರೂ.ಗೆ ಏರಿಕೆಯಾಯಿತು.

ನೌಕರಿ ಮಾಡುತ್ತಾ ಜೂನಿಯರ್ ಬಿ.ಎ.ಯಲ್ಲಿದ್ದಾಗ ರಂ. ಶ್ರೀ. ಮುಗಳಿಯವರು ಯಾವುದೋ ಭಾಷಣಕ್ಕೆ ಬಂದವರು ಲೈಬ್ರರಿಗೆ ಭೇಟಿ ನೀಡಿದ್ದರು. ಅವರ ಬಗ್ಗೆ ಸಾಕಷ್ಟು ತಿಳಿದುಕೊಂಡಿದ್ದ ಹಾವನೂರರು ತಮ್ಮ ಕನ್ನಡ ಅಭ್ಯಾಸದಲ್ಲಿ ಪರಿಣತಿಯನ್ನು ಪಡೆಯಲು ಸಾಂಗಲಿಯಲ್ಲಿ ಅವರಿದ್ದ ಕಾಲೇಜನ್ನು ಸೇರುವ ಹಂಬಲವನ್ನು ಅವರಲ್ಲಿಯೇ ವ್ಯಕ್ತಪಡಿಸಿ ಒಪ್ಪಿಗೆಯನ್ನು ಪಡೆದರು. ಆದರೆ ಬೇಕಾದ ಹಣವನ್ನು ಹೊಂದಿಸಿಕೊಳ್ಳುವುದು ದುಸ್ತರವಾದಾಗ ಮಿತ್ರ ಲಕ್ಷ್ಮೇಶ್ವರರ ಕುಟುಂಬದವರಿಂದ ನೂರು ರೂಪಾಯಿಯನ್ನು ಮತ್ತು ತಂದೆಯವರಿಂದ ೧೦೦ರೂಪಾಯಿ ಸಂಗ್ರಹಿಸಿ ಸಾಂಗಲಿಯತ್ತ ಪಯಣ ಬೆಳೆಸಿದರು. ನೂರ ತೊಂಬತ್ತಾರು ರೂಪಾಯಿಗಳನ್ನು ರಂ.ಶ್ರೀ ಮುಗಳಿಯವರ ಕೈಗಿತ್ತು ನನ್ನ ಬಿ.ಎ ಮುಗಿಸುವ ಜವಾಬ್ದಾರಿ ನಿಮ್ಮದೇ ಎಂದು ಕಣ್ಣೀರ್ತುಂಬಿಕೊಂಡಾಗ ಮುಗಳಿಯವರಿಗೆ ಸತ್ವ ಪರೀಕ್ಷೆಯೇ ಎದುರಾಗಿತ್ತು. ಹಾಸ್ಟೆಲಿನ ಪ್ರವೇಶ ಫೀಸು ಫ್ರೀ ಮಾಡಿ ಫೀಸು ತಾನೇ ತುಂಬಿ ಊಟದ ವ್ಯವಸ್ಥೆಗೆ ಹಾಸ್ಟೆಲಿನಲ್ಲಿ ಮತ್ತು ತಮ್ಮ ಮನೆಯಲ್ಲಿ ವ್ಯವಸ್ಥೆ ಮಾಡಿದರು.ಅಂತೂ ಬಿ.ಎ ಆನರ್ಸ್ ಪದವಿಯನ್ನು ಪಡೆಯುವಂತೆ ಮಾಡಿದರು. ಮುಂದೆ ಫೆಲೋಶಿಪ್ಪನ್ನು ಹಾಸ್ಟೆಲ್ ಸೂಪರಿಡೆಂಟಾಗಿ ಸಂಪಾದಿಸಿ ಕೊಂಡರು. ಫೆಲೋಶಿಪ್ಪಿನ ಬಿ.ಎ ಅವಧಿ ಮುಗಿದಾಗ ಆ ಕಾಲದಲ್ಲಿ ಯಾವುದೇ ಕಾಲೇಜಿನಲ್ಲಿ ಲೆಕ್ಚರರ್ ಆಗುವ ಅವಕಾಶ ನಿಚ್ಚಳವಾಗಿತ್ತು. ಆದರೆ ಸದಾ ಹೊಸತನಕ್ಕಾಗಿ ತುಡಿಯುವ ಸ್ವೋಪಜ್ಞ ಹಾವನೂರರಿಗೆ ಆ ಹುದ್ದೆಯಲ್ಲಿ ಸೃಜನಶೀಲತೆ ಇಲ್ಲ ಎಂದೆನಿಸಿತು. ಮುಂದೆ ಲೈಬ್ರರಿಯನ್ ಕೋರ್ಸ್ ಮಾಡುವ ಮನಸ್ಸು ಮಾಡಿ ಆ ಕಾಲದಲ್ಲಿ ಲೈಬ್ರರಿ ಕ್ಷೇತ್ರದಲ್ಲಿ ಅತ್ಯಂತ ಪ್ರಸಿದ್ಧರಾದ ಡಾ। ಎಸ್.ಆರ್. ರಂಗನಾಥರನ್ನು ಭೇಟಿಯಾದರು. ಆದರೆ ಅವರಿಂದ ಯಾವುದೇ ಸಹಾಯ ದೊರೆಯದಾದಾಗ ತಮ್ಮ ಆಶಯವನ್ನು ಅನಿವಾರ್ಯವಾಗಿ ಕೈಬಿಡಬೇಕಾಯಿತು.

ಮುಂಬಯಿಯ ಮಾತುಂಗಾದಲ್ಲಿ ಎಸ್.ಕೆ.ಇ.ಎಸ್ ಹೈಸ್ಕೂಲಿನಲ್ಲಿ ಕನ್ನಡ ಮಾಸ್ತರರಾಗಿ ಸೇರಿಕೊಂಡು ಕೆಲವು ಕಾಲದವರೆಗೆ ಸೇವೆಯನ್ನು ಸಲ್ಲಿಸಿದರು. ಮುಂದೆ ಆಕಾಶವಾಣಿ ಕೇಂದ್ರಕ್ಕೆ ಸೇರಿಕೊಂಡಾಗ ಅಲ್ಲಿ ಯಾವುದೋ ಕಾರ್ಯಕ್ರಮದ ನಿಮಿತ್ತ ಪರಿಚಯವಾದ ರಮಾಬಾಯಿಯವರೊಂದಿಗೆ ವಿವಾಹವೂ ಆಯಿತು. ಈ ನಡುವೆ ವ್ಯಾಸರಾಯ ಬಲ್ಲಾಳರ ಪರಿಚಯವಾದಾಗ ಪತ್ರಿಕೋದ್ಯಮದ ಕಡೆಗೆ ಗಮನಹರಿಸಿದರು. ಮುಂದೆ ಕೇಂದ್ರ ಸರಕಾರದ ಮುಂಬಯಿ ಶಾಖೆಯಲ್ಲಿ ಜೂನಿಯರ್ ಅಡಿಟರ್ ಆಗಿ ಸೇರಿಕೊಂಡರು. ಸೇಲ್ಸ್ ಟ್ಯಾಕ್ಸ್ ನೌಕರಿಯಲ್ಲಿ ಮುಂಬಯಿಯಲ್ಲಿದ್ದಾಗ ತಾನು ಅಪೇಕ್ಷಿಸಿದ್ದ ಲೈಬ್ರೆರಿ ಕೋರ್ಸನ್ನು ಸಂಪಾದಿಸಿದರು. ಅಲ್ಲಿಯ ಪಾಠಗಳು ಸಂಜೆ ನಡೆಯುತ್ತಿದ್ದುದು ಇವರಿಗೆ ಪ್ರಯೋಜನಕಾರಿಯಾಯಿತು. ಲೈಬ್ರೆರಿಯನ್ ಕೋರ್ಸನ್ನು ಪಡೆದದ್ದರಿಂದ ಧಾರಾವಾಡದ ಕರ್ನಾಟಕ ವಿಶ್ವವಿದ್ಯಾಲಯದ ಲೈಬ್ರೆರಿಯಲ್ಲಿ ಅಸಿಸ್ಟೆಂಟ್ ಆಗಿ ಸೇರಿಕೊಳ್ಳುವುದು ಸಾಧ್ಯವಾಯಿತು. ಗ್ರಂಥಾಲಯದ ಮೂಲಭೂತ ವ್ಯವಸ್ಥೆಯ ಬಗ್ಗೆ ಸರಿಯಾದ ಜ್ಞಾನವನ್ನು ಸಂಪಾದಿಸಿಕೊಂಡರು. ಲೈಬ್ರೆರಿಯನ್ ಆಗಿ ಅವರ ಮುಂದಿನ ನಡೆ ಸುಮಾರು ಇಪ್ಪತ್ತೊಂದು ವರ್ಷಗಳ ಕಾಲ ಸೇವೆ ಸಲ್ಲಿಸಿದ ಟಾಟ ಇನ್ಸ್‌ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ ಸಂಸ್ಥೆಯ ಕಡೆಗೆ. ಮೊದಲ ೮ ವರ್ಷ ಅಸಿಸ್ಟೆಂಟ್ ಲೈಬ್ರೆರಿಯನ್ ಆಗಿ ಮುಂದೆ ಗ್ರಂಥಪಾಲಕರಾಗಿ ಸೇವೆ ಸಲ್ಲಿಸದರು. ಸ್ವತಃ ಹಾವನೂರರು ಪಿಹೆಚ್.ಡಿ ಮಾಡುವುದರಿಂದ ಓದುಗ ಏನು ಕೇಳುತ್ತಾರೊ ಅದು ಅವರಿಗೆ ಎಷ್ಟು ಅಗತ್ಯವೆಂದು ತಿಳಿಯುವುದು ಸಾಧ್ಯವಾಯಿತು. ಮತ್ತು ಆ ತಿಳಿವಳಿಕೆಯೇ ಅವರನ್ನು ಆ ಕೆಲಸದಲ್ಲಿ ಯಶಸ್ವಿಗೊಳ್ಳುವಂತೆ ಮಾಡಿತು."What they want should be made available without delay"ಎಂಬುದನ್ನು ಲೈಬ್ರೆರಿಯ ಸೂತ್ರವನ್ನಾಗಿಸಿದರು ಮತ್ತು ಆ ನಿಟ್ಟಿನಲ್ಲಿ ಶ್ರಮಿಸಿದರು. ಸಾಕಷ್ಟು ಸುಧಾರಣೆಯನ್ನು ಮಾಡಿದರು.

ಕರ್ನಾಟಕ ವಿಶ್ವವಿದ್ಯಾಲಯದಲ್ಲಿರುವಾಗಲೇ ಎಂ.ಎ ಮುಗಿಸಿದ್ದ ಹಾವನೂರರು ಮುಂದೆ ೧೯ನೇ ಶತಮಾನದ ಸಾಹಿತ್ಯ ವಿಷಯವನ್ನು ಆಯ್ದು ಪಿಎಚ್.ಡಿ. ಮಾಡುವುದಕ್ಕಾಗಿ ನೊಂದಾಯಿಸಿದರು. ಅಭ್ಯಾಸಕ್ಕೆ ಅನುಕೂಲವಾಗುವಂತೆ ಟಿ.ಐ.ಎಫ್.ಆರ್.ನಲ್ಲಿ ಶಿಫ್ಟ್ ಡ್ಯೂಟಿ ಹಾಕಿಸಿಕೊಂಡರು. ಎರಡು ಗಂಟೆಗಳ ಕಾಲ ಯುನಿವರ್ಸಿಟಿಯಲ್ಲಿ ಓದಿ ಆಫೀಸಿಗೆ ಹೋಗುತ್ತಿದ್ದರು. ಡಾಕ್ಟರೇಟ್ ಡಿಗ್ರಿ ಪಡೆದ ಹಾವನೂರರು ಮುಂದೆ ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ನೇಮಕವಾದರು. ಇದರ ಹಿಂದೆ ಡಾ.ಹಾ.ಮಾ. ನಾಯಕರ ಪಾತ್ರವೂ ಇತ್ತು. ಅಂದಿನ ಕುಲಪತಿಗಳಾದ ಡಾ.ಬಿ. ಶೇಕ್ ಆಲಿಯವರಿಗೆ ಹಾ.ಮಾ.ನಾ ಅವರ ಮೇಲೆ ಪರಮ ವಿಶ್ವಾಸವಿತ್ತು. ಇದರಿಂದ ಹಾವನೂರರು ನೇರವಾಗಿ ನೇಮಕಾತಿಯನ್ನು ಪಡೆದಿದ್ದರು. ವಿಶ್ವವಿದ್ಯಾನಿಲಯ ದಲ್ಲಿದ್ದ ಎರಡು ವರ್ಷಗಳಲ್ಲಿ ಕನ್ನಡ ವಿಭಾಗವನ್ನು ವ್ಯವಸ್ಥಿತವಾಗಿ ಕಟ್ಟುವಲ್ಲಿ ಹಾವನೂರರು ವಿಶೇಷವಾಗಿ ಶ್ರಮಿಸಿದ್ದಾರೆ. ಅದರಲ್ಲಿ ಎರಡು ಮಹತ್ವದ ಕಾರ್ಯಗಳನ್ನು ಇಲ್ಲಿ ಸ್ಮರಿಸಬಹುದು. ಒಂದನೆಯದು ಸಂಶೋಧನ ಪ್ರಕ್ರಿಯೆಗೆ ಸೂಕ್ತ ತಳಹದಿಯನ್ನು ರೂಪಿಸಿದ್ದು, ಎರಡನೆಯದು ದ.ಕ ಜಿಲ್ಲೆಯ ಪರಿಸರದ ಸಾಂಸ್ಕೃತಿಕ ಅವಶೇಷಗಳನ್ನು

ಸಂಗ್ರಹಿಸಿ ವಸ್ತು ಸಂಗ್ರಹಾಲಯವನ್ನು ನಿರ್ಮಿಸಿದ್ದು, ಇದಕ್ಕಾಗಿ ಪ್ರತಿ ರವಿವಾರ ಪ್ರಾಚೀನ ಕುರುಹುಗಳನ್ನರಸುತ್ತಾ ನಾಡಿನಾದ್ಯಂತ ಸಂಚರಿಸಿದ್ದು ಈ ನಡುವೆ ದ.ಕ ಜಿಲ್ಲೆಯ ಎರಡು ದೀರ್ಘಕಾಲೀನ ಪತ್ರಿಕಾ ಸಂಪುಟಗಳಾದ ಮಂಗಳೂರಿನ 'ಸ್ವದೇಶಾಭಿಮಾನಿ' ಹಾಗೂ ಉಡುಪಿಯ 'ನವಯುಗ'ಗಳನ್ನು ದೊರಕಿಸಿಕೊಂಡಿದ್ದರು.

ಇದೇ ಸಂದರ್ಭದಲ್ಲಿ ಸುಮಾರು ಮೂರು- ನಾಲ್ಕು ಜನರು ಇವರ ಮಾರ್ಗದರ್ಶನದಲ್ಲಿ ಪಿಹೆಚ್.ಡಿಗಾಗಿ ನೊಂದಾಯಿಸಿದ್ದರು. ಎರಡು ವರ್ಷಗಳಲ್ಲಿ ಪೂರ್ತಿಗೊಳಿಸುವುದು ಅಸಾಧ್ಯವಾದದ್ದರಿಂದ ಮುಂಬಯಿಯಿಂದ ವಿದ್ಯಾರ್ಥಿಗಳಿಗಾಗಿ ನಡುನಡುವೆ ಮಂಗಳೂರಿಗೆ ಬರುತ್ತಿದ್ದರು.

ಡಾ। ಹಾವನೂರು ಮುಂದಕ್ಕೆ ಡಾ.ಮು.ಸಾ ಅವರ ಕಾರಣದಿಂದಲೇ ಮುಂಬಯಿ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರಾದರು. ಮಂಗಳೂರಿನಂತೆಯೇ ಅಲ್ಲಿಯೂ ಹಲವಾರು ಸೆಮಿನಾರ್‌ಗಳನ್ನು ನಡೆಸಿದರು. ಗ್ರಂಥಗಳನ್ನು ಹೊರತಂದರು. ಅದರಲ್ಲಿ ಮರಾಠಿ-ಕನ್ನಡದ ಸೌಹಾರ್ದಕ್ಕೆ ಹೆಚ್ಚಿನ ಒತ್ತನ್ನು ನೀಡಲಾಗಿತ್ತು. ಉದಾ:- ಶಿವಾಜಿ ಮಲ್ಲಮ್ಮಾಜಿ ಸಮರೋತ್ಸವ, ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ ಕಾರಂತರ ಕಾದಂಬರಿಗಳು; ಮಹಾರಾಷ್ಟ್ರದಲ್ಲಿಯ ಕನ್ನಡ ಶಾಸನಗಳು ಮುಂತಾದ ಗ್ರಂಥಗಳನ್ನು ಪ್ರಕಟಿಸಲಾಯಿತು. ವಿಭಾಗದ ವತಿಯಿಂದ ಕನ್ನಡೇತರರಿಗೆ ಕನ್ನಡ ಕಲಿಸುವ ವ್ಯವಸ್ಥೆಯನ್ನು ಮಾಡಲಾಯಿತು. ಅಕಾಡೆಮಿಕ್ ಆಗಿ ಎಂ.ಫಿಲ್ ವರ್ಗಗಳನ್ನು ಆರಂಭಿಸಿದರು.

ಹಾವನೂರರು ಮಹಾರಾಷ್ಟ್ರದ ಶಾಲಾ ಮಕ್ಕಳ ಕನ್ನಡ ವಾಚನ ಪುಸ್ತಕ ತಯಾರಿಸುವ ಸರಕಾರಿ ಸಮಿತಿಯ ಗೌರವ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಹೀಗೆ ಸಾಧನೆಯ ಬಹುಮಜಲನ್ನು ಏರಿ ನಿಂತಿರುವ ಹಾವನೂರರ ಗುಟ್ಟು ಅವರ ವಿಕಿತ್ಸಕ ದೃಷ್ಟಿಕೋನ, ಅಸಾಧಾರಣವಾದ ತಾಳ್ಮೆ, ನವನವೋನ್ಮೇಷಶಾಲಿ ವಿಷಯ ವಿಚಾರಗಳತ್ತ ತೆರೆದ ಮನಸ್ಸು, ಹಿಂಗದ ಹಸಿವುಳ್ಳ ಜ್ಞಾನ ಪಿಪಾಸು ಗುಣ.

ಕಾಯಕ ಶಿಸ್ತು ಡಾ। ಹಾವನೂರರ ಮುಖ್ಯ ಗುಣಗಳಲ್ಲೊಂದಾಗಿತ್ತು. ದೈನಂದಿನ ದಿನಚರಿಯನ್ನು ಅತ್ಯಂತ ವ್ಯವಸ್ಥಿತವಾಗಿ ಹೊಂದಿಸಿಕೊಳ್ಳುತ್ತಿದ್ದರು. ಕೆಲಸಗಳೆಲ್ಲವೂ ನಿಗದಿತ ಸಮಯದಲ್ಲೇ ಆಗಲೇಬೇಕಿತ್ತು. ಅದಕ್ಕಾಗಿ ಹಗಲಿರುಳು ಧ್ಯಾನಮಗ್ನರಾಗುವಂತೆ ಕುಳಿತುಕೊಳ್ಳುವ ಅವರ ಕಾರ್ಯತತ್ಪರತೆಯನ್ನು ಕಂಡು ಅವರ ಮಿತ್ರರೊಬ್ಬರು ಅವರಿಗೆ 'ಕಾರ್ಯಾನಂದ' ಎಂಬ ಅಭಿದಾನವನ್ನಿತ್ತಿದ್ದರು.ಯಾವುದೇ ಕೆಲಸವನ್ನು ಮಾಡುವುದಕ್ಕೆ ಮುಂಚಿತವಾಗಿ ವೈಜ್ಞಾನಿಕವಾದ ಪೂರ್ವ ಸಿದ್ಧತೆಯನ್ನು ಮಾಡುವುದು ಹಾವನೂರುತನ.

ಡಾ। ಹಾವನೂರರದು ವೈವಿಧ್ಯಮಯವಾದ ಆಸಕ್ತಿ. ಯಾವುದೋ ಒಂದು ವಿಷಯವನ್ನು ಒಪ್ಪಿ ಅದನ್ನೇ ಅಪ್ಪಿಕೊಂಡಿರುವುದು ಅವರ ಜಾಯಮಾನವಲ್ಲ. ಸಾಹಿತಿಯಾಗಿ. ಸಾಹಿತ್ಯ ಪರಿಚಾರಕರಾಗಿ, ಸಂಶೋಧಕರಾಗಿ, ಇತಿಹಾಸ ಅನ್ವೇಷಕರಾಗಿ, ಪತ್ರಿಕೋದ್ಯಮಿಯಾಗಿ, ಕಂಪ್ಯೂಟರೀಕರಣಾಸಕ್ತರಾಗಿ, ಕನ್ನಡ-ಮರಾಠಿ ಸೌಹಾರ್ದಕಾರರಾಗಿ, ಹರಿದಾಸ ಸಾಹಿತ್ಯದ ಅಧ್ಯಯನಕಾರರಾಗಿ, ಅನುವಾದಕರಾಗಿ, ಸಂಪಾದಕರಾಗಿ ಹೀಗೆ ಅವರ ಹತ್ತು ಹಲವು ಮುಖಗಳನ್ನು ಕಾಣಬಹುದಾಗಿದೆ.

ಏಕಕಾಲಕ್ಕೆ ೨–೩ ವಿಷಯಗಳಲ್ಲಿ ತೊಡಗುವುದು ಹಾವನೂರರ ಸ್ವಭಾವ. ಆದರೆ ಅವುಗಳಲ್ಲಿ ಅತೀ ಮುಖ್ಯ ಯಾವುದೆಂದು ಕಂಡುಕೊಂಡು ಅದರ ಕೆಲಸವನ್ನು ಮುಗಿಸುವುದು ಅವರ ಜಾಣತನ. ತಾನು ನಿರ್ವಹಿಸುತ್ತಿರುವ ಹಲವಾರು ವಿಷಯಗಳನ್ನು ಗೊಂದಲವಿಲ್ಲದೆ, ಅನುದ್ವೇಗಕರವಾಗಿ ನಿಷ್ಠೆಯಿಂದ ನಿರ್ವಹಿಸುವ ಕಲೆ ಅವರಲ್ಲಿ ಕರಗತವಾಗಿತ್ತು. ವಿವಿಧ ವಿಷಯಗಳಿಗೆ ಪ್ರತ್ಯೇಕವಾದ ಫೈಲುಗಳನ್ನು ತಯಾರಿಸಿ ವ್ಯವಸ್ಥಿತವಾಗಿ ಜೋಡಿಸುತ್ತಿದ್ದರು. ಪ್ರತಿಯೊಂದು ಕೆಲಸಗಳಲ್ಲಿ ಒಪ್ಪ ಓರಣ ಎದ್ದು ಕಾಣುತ್ತಿತ್ತು. ಸಂಗ್ರಹಿಸಿದ ಮಾಹಿತಿಯನ್ನು ವೈಜ್ಞಾನಿಕವಾಗಿ ವ್ಯವಸ್ಥೆ ಮಾಡುವುದರಲ್ಲಿ ನಿಸ್ಸೀಮರು.

ಹಾವನೂರರಲ್ಲಿ ಈ ರೀತಿಯ ವೈವಿಧ್ಯಮಯವಾದ ಆಸಕ್ತಿ ಮೂಡುವಲ್ಲಿ, ಮತ್ತು ಅಭಿವ್ಯಕ್ತಿಯ ಕುಶಲತೆಯಲ್ಲಿ ಪರಿಪೂರ್ಣತೆಯನ್ನು ಸಾಧಿಸುವಲ್ಲಿ ಅವರ ವಿಭಿನ್ನವಾದ ಉದ್ಯೋಗ ಕ್ಷೇತ್ರ, ಸೇರಿದ ಮುಂಬಯಿಯಂತಹ ಬಹುಭಾಷಾ, ಬಹುಸಂಸ್ಕೃತಿಯ ತಾಣ, ಕೈಗೊಂಡ ಹಲವು ವಿದೇಶಯಾತ್ರೆ ಹಾಗೂ ಯೌವನದಲ್ಲಿ ತೊಡಗಿಸಿಕೊಂಡಿದ್ದ ನಾಟಕದಂತಹ ಹವ್ಯಾಸಗಳು ಕಾರಣ ಇದ್ದಿರಬಹುದು. ಇವೆಲ್ಲ ಅವರಿಗೆ ಸಮಾಜವನ್ನು ಒಳಹೊಕ್ಕು ನೋಡುವುದಕ್ಕೆ, ಜನಜೀವನವನ್ನು ಆಳವಾಗಿ ಅರ್ಥೈಸಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಟ್ಟಿತ್ತು. ಅಲ್ಲದೆ ಪಾತ್ರ, ಚಿತ್ರಣ, ವಿಷಯ ಯಾವುದೇ ಇರಲಿ ಅದನ್ನು ಅತ್ಯಂತ ಸುಂದರವಾಗಿ ಅಭಿವ್ಯಕ್ತಪಡಿಸುವ ಅಗತ್ಯತೆ ಅನಿವಾರ್ಯತೆ ಮತ್ತು ಸಾಧ್ಯತೆಯನ್ನು ಕಂಡುಕೊಂಡರು. ಆದುದರಿಂದಾಗಿಯೇ ಶ್ರೀಯುತರು ಯಾವುದೇ ಸ್ಥಾನದಲ್ಲಿರಲಿ, ಸಂಸ್ಥೆಯಲ್ಲಿರಲಿ ಅದಕ್ಕೆ ಗೌರವವನ್ನುಂಟು ಮಾಡುವುದು ಅವರಿಗೆ ಸಾಧ್ಯವಾಗಿತ್ತು.

ಯಾವುದೇ ಸತ್ಯವನ್ನು ಕಂಡುಕೊಳ್ಳುವಲ್ಲಿ ಹಾವನೂರರು ಆನುಷಂಗಿಕ ಮಾಹಿತಿಯನ್ನು ನೆಚ್ಚಿಕೊಳುತ್ತಿರಲಿಲ್ಲ. ಮೂಲ ಆಕರ ಸಾಮಗ್ರಿಯನ್ನು ಹುಡುಕುತ್ತಾ ನಾಡಿನ ಮೂಲೆ ಮೂಲೆಗಳಲ್ಲಿ ಸಂಚಾರ ಮಾಡುತ್ತಿದ್ದರು. ಛಲ ಬಿಡದ ತ್ರಿವಿಕ್ರಮನಾಗುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎರಡು ವರ್ಷಗಳಲ್ಲಿ ಅವರು ಮಾಡಿದ ಕೆಲಸವನ್ನು ಇಲ್ಲಿ ಸ್ಮರಿಸಬಹುದು.

ತನ್ನ ನಿರಂತರ ಮಥನದಿಂದ ತಾನು ಕಂಡುಕೊಂಡ ಹೊಸ ಸತ್ಯವನ್ನು ತಾನೊಬ್ಬನೇ ಆಸ್ವಾದಿಸುವುದರಲ್ಲಿ ಅವರಿಗೆ ತೃಪ್ತಿ ಇರಲಿಲ್ಲ. ಅದು ಇತರರಿಗೂ ಹಂಚಿಕೆಯಾಗಬೇಕು. ಆ ಮೂಲಕ ಕನ್ನಡ ಸಾಹಿತ್ಯ ಪರಂಪರೆಯ ಕ್ಷಿತಿಜ ವಿಸ್ತೃತವಾಗಬೇಕು ಎಂದು ಹಂಬಲಿಸುವವರು. ಇಲ್ಲಿ ತಾನು ಕಲಿಯುವುದರ ಜೊತೆಗೆ ಇತರರನ್ನು ಆ ಮಾರ್ಗದಲ್ಲಿ ಮುನ್ನಡೆಸುವುದರಲ್ಲಿ, ಪ್ರೇರೇಪಿಸುವುದರಲ್ಲಿ ಹಾವನೂರರು ನಿಸ್ಸೀಮರು.

ಡಾ। ಹಾವನೂರರಲ್ಲಿ ಅಗಾಧವಾದ ಜ್ಞಾನ ರಾಶಿಯಿದ್ದು ಯಾರಾದರೂ ಅಂಕಣ ಬರೆಯುವುದಕ್ಕಾಗಿಯೋ ಅಥವಾ ಹೊಸ ವಿಷಯದ ಅಧ್ಯಯನಕ್ಕಾಗಿಯೋ ಹಾವನೂರನ್ನು ಸಂಪರ್ಕಿಸಿದರೆ ಅದಕ್ಕೆ ಬೇಕಾದ ಮಾಹಿತಿ ಅಥವಾ ಅದು ಇರುವ ನೆಲೆ ತಕ್ಷಣವಾಗಿ ದೊರಕುತ್ತಿತ್ತು.

ರಾಯಭಾರತ್ವ ಮತ್ತು ಹಾವನೂರರಿಗೂ ಅವಿನಾಭಾವವಾದ ನಂಟು. ಯಾವುದೋ ಕಾರಣಕ್ಕಾಗಿ ಮನೆ ಬಿಟ್ಟು ಹೋದವರನ್ನು ಮರಳಿ ಗೂಡಿಗೆ ಸೇರಿಸುವುದು, ಪ್ರೇಮ

ಪ್ರಕರಣಗಳಲ್ಲಿ ಮಧ್ಯವರ್ತಿಯಾಗುವುದು. ಇದು ಇವರ ವಿದ್ಯಾರ್ಥಿ ದೆಸೆಯಲ್ಲೇ ನಡೆದು ಬಂದದ್ದು. ಮುಂದೆ ವೃತ್ತಿರಂಗದಲ್ಲು ಈ ಗುಣವನ್ನು ಮುಂದುವರಿಸಿಕೊಂಡು ಹೋದರು. ಬಂಧುಗಳಲ್ಲಿ ಮದುವೆ ನೆಂಟಸ್ತಿಕೆಯನ್ನು ಬೆಸೆಯುತ್ತಿದ್ದುದೂ ಇವರ ಹವ್ಯಾಸ. ಇವರ ಬಹುಮುಖಿ ಆಸಕ್ತಿಯ ಫಲವಾಗಿ ವಿವಿಧ ಕುಟುಂಬಗಳ ಪರಿಚಯ ಇವರಿಗಿತ್ತು. ಹೀಗಾಗಿ ಎರಡು ಕುಟುಂಬಗಳ ಗಂಡು ಹೆಣ್ಣುಗಳನ್ನು ದೂರದಿಂದ ಒಂದುಗೂಡಿಸಿ ನಿರ್ಲಿಪ್ತರಾಗಿರುತ್ತಿದ್ದರು.

ಡಾ। ಹಾವನೂರರು ಸ್ವತಃ ತಿಂಡಿಪ್ರೋತರಾಗಿದ್ದರು. ಜೊತೆಗೆ ಬೇರೆಯವರಿಗೂ ನೀಡಿ ಸಂತಸ ಪಡುವುದು ಅವರ ವಿಶೇಷ ಗುಣ. ಸದಾ ಅವರ ಬಳಿಯಲ್ಲಿ ಒಂದಲ್ಲೊಂದು ಬಗೆಯ ತಿಂಡಿ ತಿನಿಸುಗಳಿರುತ್ತಿತ್ತು. ಯಾರೇ ಬಂದರೂ ಅದನ್ನು ತೆಗೆದು ಕೊಡುತ್ತಿದ್ದರು. ಅದರಲ್ಲೂ ಸಿಹಿತಿಂಡಿ ಅಂದರೆ ಅವರಿಗೆ ಇನ್ನೂ ಪ್ರೀತಿ ಜಾಸ್ತಿ. ಸ್ವತಃ ನಳಪಾಕವನ್ನು ತಯಾರಿಸಬಲ್ಲವರಾಗಿದ್ದ ಹಾವನೂರು ಆಹಾರಕ್ಕಾಗಿ ಹೊಟೇಲುಗಳನ್ನು ಆಶ್ರಯಿಸುತ್ತಿರಲಿಲ್ಲ.

ಹಾವನೂರರಿಗೂ ಬಾಸೆಲ್-ಮಿಶನ್‌ಗೂ ಅತ್ಯಂತ ಹತ್ತಿರದ ಸಂಬಂಧ. ಇವರ ಸಂಶೋಧನ ಕೃತಿ ಹೊಸಗನ್ನಡ ಅರುಣೋದಯದ ಬಹುಪಾಲು ಬಾಸೆಲ್ ಮಿಶನ್ನಿನ ಚರಿತ್ರೆಯ ಅನಾವರಣದಿಂದ ಕೂಡಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಕಾಲೇಜು ಮತ್ತು ತಿಯೋಸಾಫಿಕಲ್ ಸಂಶೋಧನಾ ಕೇಂದ್ರ ಇವು ಬಾಸೆಲ್ ಮಿಶನ್ನಿನ ಟಿಸಿಲುಗಳು. ಹಾವನೂರರು ಈ ಸಂಸ್ಥೆಯೊಂದಿಗೆ ಅತ್ಯಂತ ನಿಕಟ ಸಂಬಂಧವನ್ನು ಬೆಳೆಸಿಕೊಂಡಿದ್ದರು. ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದ ಕಾಲದಲ್ಲಿ ಇಲ್ಲಿಯ ಪತ್ರಾಗಾರಕ್ಕೆ ಅಗಾಗ ಭೇಟಿ ನೀಡುತ್ತಿದ್ದರು. ಮತ್ತು ಅಲ್ಲಿಯ ಆಕರ ಸಾಮಗ್ರಿಗಳ ಜೊತೆಗೆ ಮಾತನಾಡುತ್ತಿದ್ದರು. ನಿವೃತ್ತಿಯ ಅನಂತರ ಹಾವನೂರರು ಈ ಸಂಸ್ಥೆಗೆ ಗೌರವ ಸಂಪಾದಕರಾಗಿ ಬಂದು ಇಲ್ಲಿಯ ಪತ್ರಾಗಾರಕ್ಕೆ ಸಾಕಷ್ಟು ಕೊಡುಗೆಯನ್ನು ಸಲ್ಲಿಸಿದ್ದಾರೆ. ಬಾಸೆಲ್ ಮಿಷನ್ ಪ್ರೆಸ್‌ನಲ್ಲಿ ಮುದ್ರಣಗೊಂಡ ಹಾಗೂ ಪ್ರಕಾಶಿಸಿದ ಅನೇಕ ಪುಸ್ತಕಗಳು ಇಲ್ಲಿಯ ಪತ್ರಾಗಾರದಲ್ಲಿಲ್ಲದ್ದನ್ನು ಮನಗಂಡು ಅವೆಲ್ಲವೂ ಇಲ್ಲಿಗೆ ದೊರಕುವಂತೆ ಮಾಡಿದ್ದಾರೆ. ಮೈಕ್ರೋಫಿಲ್ಮ್‌ನ್ನು ಓದುವ ಸಲುವಾಗಿ ಮೈಕ್ರೋಫಿಲ್ಮ್ ರೀಡರ್‌ನಂತಹ ಉಪಕರಣವನ್ನು ಪುನರ್ ರೂಪಿಸುವಲ್ಲಿ ಡಾ.ಹಾವನೂರರು ಮಹತ್ವದ ಪಾತ್ರವನ್ನು ನಿರ್ವಹಿಸಿದ್ದರು. ಹೊಸದಾಗಿ ಸೇರ್ಪಡೆಯಾದ ಮತ್ತು ಈ ಹಿಂದೆ ಇದ್ದಂತಹ ಪುಸ್ತಕಗಳನ್ನು ವಿಜ್ಞಾನದ ನಿಯಮಾನುಸಾರ ವರ್ಗೀಕರಿಸಿ ಒಂದು ಕ್ಯಾಟಲಾಗನ್ನು ಸಿದ್ಧಪಡಿಸಿಕೊಟ್ಟಿದ್ದರು. ಗ್ರಂಥಪಾಲನೆಯ ತನ್ನ ಅನುಭವವನ್ನು ಬಳಸಿ ಹಳೆಯ ಕಾಲದ ಗ್ರಂಥಾಲಯವನ್ನು ಹೊಸ ವರ್ಗೀಕರಣ ತತ್ವಕ್ಕೆ ಅಳವಡಿಸಿ, ಬರುವ ಜ್ಞಾನಾಕಾಂಕ್ಷಿಗಳಿಗೆ ನೆರವು ನೀಡಿದ್ದರು. ಅಲ್ಲದೆ ತಮ್ಮ ಜೀವಿತಾವಧಿಯಲ್ಲಿ ತಾವು ಸಂಗ್ರಹಿಸಿದ್ದ ಅಮೂಲ್ಯ ಸಾವಿರದ ಐನೂರು ಕೃತಿ ರತ್ನಗಳನ್ನು ಕೆ.ಟಿ.ಸಿ ಗ್ರಂಥಾಲಯಕ್ಕೆ ದಾನವಾಗಿ ನೀಡಿದ್ದಾರೆ. ಇದರಲ್ಲಿ ಹಿರಿಯ ಲೇಖಕರ ಸಮಗ್ರ ಸಂಪುಟಗಳು, ವಿಮರ್ಶಾ ಗ್ರಂಥಗಳು, ಪ್ರಥಮ ಜಾಗತಿಕ ಯುದ್ಧ ಕಾಲದ ಠಾಗೂರರ ಕೃತಿಗಳು ಜರ್ಮನ್ ಭಾಷೆಗೆ ಅನುವಾದಗೊಂಡಿದ್ದು

ಅಂತಹ ಅಪರೂಪದ ಕೃತಿಗಳು ಇದರಲ್ಲಿ ಸೇರಿದೆ.

ಡಾ.ಹಾವನೂರರು ಪ್ರೊಫೆಸರ್ ಆಗಿ ನಿವೃತ್ತರಾದ ಮೇಲೆ ಮೊದಲಿಗಿಂತಲೂ ಹೆಚ್ಚು ಕ್ರಿಯಾಶೀಲರಾಗಿದ್ದರು. ಟಿವಿ, ಕ್ರಿಕೆಟ್ ಆಟ ವೀಕ್ಷಣೆ, ಹಿಂದೂಸ್ಥಾನಿ ಸಂಗೀತ ಕೇಳುವುದು ಇವರಿಗೆ ಪ್ರಿಯವಾದ ವಿಷಯ. ಕೆಲಸಕ್ಕೆ ಕೂತರೆ ಪೂರ್ಣವಾಗುವವರೆಗೆ ಹಸಿವು-ನೀರಡಿಕೆಯ ನೆನಪಾಗುತ್ತಿರಲಿಲ್ಲ. ಹಾವನೂರರ ಕೆಲಸದ ನಿಷ್ಠೆಗೆ ಒಳ್ಳೆಯ ಉದಾಹರಣೆಯೆಂದರೆ ಪ್ರಾಣಾಂತಿಕವಾದ ಜಡ್ಡಿನಿಂದ ಹಾಸಿಗೆ ಹಿಡಿದು ಆಸ್ಪತ್ರೆಯ ಐ.ಸಿ.ಯು ನಲ್ಲಿದ್ದಾಗ ಅವರು ಹೇಳುತಿದ್ದುದು "ನನ್ನ ದಾಸ ಸಾಹಿತ್ಯದ ಕೆಲಸ ತುಸು ಬಾಕಿ ಉಳಿದಿದೆ. ಅದನ್ನು ಮುಗಿಸಬೇಕು ಹಾಗೆ ಗುರುಗಳಿಗೆ ಬೇಡಿಕೊ".

ಹಾವನೂರರು ವಿಶಿಷ್ಟವಾದ ಇಚ್ಛಾಶಕ್ತಿಯನ್ನು ಪಡೆದುಕೊಂಡವರು. ಅದಕ್ಕೆ ಕೆಲವೊಂದು ಉದಾಹರಣೆ ಕೊಡುವುದಾದರೆ ಶ್ರೀಯುತರು ಕಿಡ್ನಿ ಜಡ್ಡಿನಿಂದ ಗುಣವಾದಾಗ ಡಾಕ್ಟರ್ ಹೇಳಿದ ಮಾತು –'ಹಾವನೂರರೇ ನಾವೇನೋ ಔಷಧ ಕೊಟ್ಟು ಗುಣ ಮಾಡಿದ್ದೇವೆ. ಆದರೆ ೭೮ನೆಯ ವಯಸ್ಸಿನಲ್ಲಿ ಬದುಕಿ ಉಳಿದದ್ದು ನಿಮ್ಮ ವಿಲ್ ಪವರ್‌ನಿಂದ'.

ಹೃದಯಾಘಾತದ ಜಡ್ಡಿನಿಂದ ಗುಣಮುಖರಾಗಿ ಜರ್ಮನಿಗೆ ಹೋಗಬೇಕಾಗಿ ಬಂದಾಗ ವಿಮೆ ಮಾಡಿಸಲು ಶಿಫಾರಸ್ಸಿಗಾಗಿ ವೈದ್ಯರ ಬಳಿ ಹೋದಾಗ ಪರೀಕ್ಷಿಸಿದ ಅವರು ನಿಮಗೆ ಹೃದಯ ವಿಕಾರವಾಗಿತ್ತು ಎಂದು ನೀವೇ ಹೇಳಿದ್ದೀರಾದ್ದರಿಂದ ನಂಬುತ್ತೇನೆ. ಅದರ ಕುರುಹೂ ಇಲ್ಲ ಎಂದರಂತೆ. ಇದು ಹಾವನೂರರ ಇಚ್ಛಾಶಕ್ತಿಯ ನಿಮಿತ್ತವಾಗಿಯೇ ಹೊರತು ಇನ್ನೊಂದು ಕಾರಣದಿಂದ ಅಲ್ಲ. ಇಂತಹ ಶ್ರೇಷ್ಠ ಸಂಶೋಧಕರ ಕುರಿತು ಸಂಶೋಧನೆ ನಡೆಸುವ ಈ ಪ್ರಯತ್ನ ಸಾಗರಕ್ಕೆ ಸುರಿದ ಕೊಡ ನೀರಾದರೂ ಅದನ್ನೊಂದು ಮನಃಪೂರ್ವಕವಾಗಿ ಮಾಡಬೇಕಾದ ಕೆಲಸವೆಂದು ಪರಿಗಣಿಸಿ ನಿರ್ವಹಿಸಿ ದ್ದೇನೆಂಬ ತೃಪ್ತಿ ನನಗಿದೆ.

## ಹಾವನೂರರ ಸಂಶೋಧನೆ : ವಿಧಾನಗಳು ಮತ್ತು ರೀತಿಗಳು

ಬಹುಮುಖಿ ಆಸಕ್ತಿಯ ಡಾ। ಹಾವನೂರರು ಸಂಶೋಧಕರಾಗಿ ಮಾಡಿರುವ ಸಾಧನೆ ಅಪೂರ್ವವಾದುದು. ಜೀವನದ ಪ್ರತಿ ಹೆಜ್ಜೆಯಲ್ಲು ಹೊಸತನವನ್ನು ಹುಡುಕುವುದು ಅವರ ಜಾಯಮಾನವಾಗಿದ್ದಿತು. ಈ ಹುಡುಕುವಿಕೆಯೇ ಹತ್ತೊಂಬತ್ತನೆಯ ಶತಮಾನದ ಸಾಹಿತ್ಯ ಲೋಕಕ್ಕೆ ಬೆಳಕು ಹಾಯಿಸಲು ಕಾರಣವಾದ್ದು. ಡಾ.ಹಾವನೂರರು ವಿದ್ವದಾದರಣೆಗೆ ಪಾತ್ರವಾಗುವಂತಹ ಹಲವಾರು ಸಂಶೋಧನಾ ಲೇಖನಗಳನ್ನು, ಬಿಡಿ ಬರೆಹಗಳನ್ನು ಪ್ರಕಟಿಸಿದ್ದಾರೆ. ಆಕರಗಳನ್ನು ಸಂಗ್ರಹಿಸಿದ್ದಾರೆ. ಇಂತಹ ಮಹಾನ್ ಮೇಧಾವಿಯು ಸಂಶೋಧನೆಯ ಬಗ್ಗೆ ರೂಪಿಸಿಕೊಂಡಿದ್ದ ವಿಧಿವಿಧಾನಗಳ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

ಪಾಶ್ಚಾತ್ಯ ಸಂಪರ್ಕದಿಂದ ಭಾರತದಲ್ಲಿ ಅಸ್ತಿತ್ವಕ್ಕೆ ಬಂದ ಹೊಸ ಶೈಕ್ಷಣಿಕ ಶಿಸ್ತು ಸಂಶೋಧನೆ. ಇದು ಇಂಗ್ಲೀಷ್‌ನ Re-search ಎಂಬ ಪದಕ್ಕಿರುವ ಸಂವಾದಿ ಪದ. ಇಲ್ಲಿ Re ಎಂದರೆ ಚೆನ್ನಾಗಿ, ಸರಿಯಾಗಿ ಎಂದರ್ಥ. search ಎಂದರೆ ಹುಡುಕು ಎಂಬ ಅರ್ಥವನ್ನು ನೀಡುತ್ತದೆ. ಆದ್ದರಿಂದ Research ಎಂದರೆ 'ಚೆನ್ನಾಗಿ ಹುಡುಕು' ಸರಿಯಾಗಿ ಹುಡುಕು ಎಂಬ ಅರ್ಥವನ್ನು ಧ್ವನಿಸುತ್ತದೆ.

ಡಾ.ಹಾವನೂರರ ಪ್ರಕಾರ ಸಂಶೋಧನೆ ಎಂದರೆ ಹೊಸದನ್ನು ಕಂಡುಹಿಡಿಯುವುದೇ ಹೊರತು ಹುಡುಕುವುದಲ್ಲ. ಈಗಾಗಲೇ ಇದ್ದುದನ್ನು ಹುಡುಕುವುದು. ಇದರಲ್ಲಿ ಹೊಸತನವಿಲ್ಲ ಇದು ಬರಿಯ ಶೋಧನೆ ಹೊರತು ಸಂಶೋಧನೆಯಲ್ಲ. ಗೊತ್ತಿಲ್ಲದ್ದನ್ನು ಹೊಸದಾಗಿ ಕಂಡು ಹಿಡಿಯುವುದು. ಸಂಶೋಧನೆ ಎಂದೆನಿಸಿಕೊಳ್ಳುತ್ತದೆ ಮತ್ತು ಈ ಗೊತ್ತಿಲ್ಲದ್ದು ಎಂಬುವುದರಲ್ಲಿ ಹಲವಾರು ರೀತಿ ಇರುತ್ತದೆ. ಅವುಗಳು:

### ವಿಷಯದ ಬಗ್ಗೆ ಏನೂ ಗೊತ್ತಿಲ್ಲದಿರುವುದು

- ಇಲ್ಲಿ ಒಬ್ಬ ವ್ಯಕ್ತಿ, ಕಾಲ, ವಿಷಯ, ಅಥವಾ ದೇಶದ ಬಗ್ಗೆ ಯಾವುದೇ ಜ್ಞಾನವಿರುವುದಿಲ್ಲ. ಅಧ್ಯಯನ ಆರಂಭದಿಂದಲೇ ಆಗಬೇಕಾಗುತ್ತದೆ.

ಹಾವನೂರರೇ ಹೇಳುವಂತೆ ೧೮ನೇ ಶತಮಾನದ ಕನಿಷ್ಠ ಎಂದರೆ ೨೦೦-೨೫೦ ಮಂದಿ ಕವಿಗಳು ಹುಡುಕಿದರೆ ಸಿಗುತ್ತಾರೆ. ಆದರೆ ಸಾಹಿತ್ಯದ ಇತಿಹಾಸಕಾರರು ಆ ವಿಷಯದ ಬಗ್ಗೆ ಅಜ್ಞಾನಿಗಳಾಗಿದ್ದು ಆ ಕಾಲದಲ್ಲಿ ಕನ್ನಡ ಸಾಹಿತ್ಯ ಏನೂ ಇರಲಿಲ್ಲ ಎಂದಿದ್ದರು.

- ವಿಷಯದ ಬಗ್ಗೆ ಮಸುಮಸುಕಾದ ಜ್ಞಾನ. ಉದಾ: ಹತ್ತೊಂಬತ್ತನೇ ಶತಮಾನದ ಸಾಹಿತ್ಯ. ಇದರ ಬಗ್ಗೆ ಪೂರ್ಣ ಕಲ್ಪನೆ ಇಲ್ಲ.
- ವಿಷಯದ ಕುರಿತಾಗಿ ಸ್ವಲ್ಪ ಮಾತ್ರ ತಿಳಿದಿರುವುದು ಇಲ್ಲಿ ಪೂರ್ಣವಾದ ಜ್ಞಾನವನ್ನು ಪಡೆಯಬೇಕಾದರೆ ಕೂಲಂಕಷವಾದ ಅಧ್ಯಯನ ನಡೆಯಬೇಕಾಗುತ್ತದೆ. ರನ್ನನು ತನ್ನ ಗದಾಯುದ್ಧಕ್ಕೆ ಪಂಪನ ನೆರವನ್ನು ಪಡೆದಿದ್ದಾನೆ. ೧೩-೧೪ನೇ ಅಶ್ವಾಸ ತೆಗೆದು ಕೊಂಡಿದ್ದಾನೆ ಎಂದು ತಿಳಿದಿದೆ. ಬೇರೆ ಏನು ನೆರವು ಪಡೆದಿದ್ದಾನೆ ಗೊತ್ತಿಲ್ಲ.
- ವಿಷಯದ ಬಗ್ಗೆ ತಪ್ಪಾಗಿ ತಿಳಿದಿರುತ್ತೇವೆ. ಉದಾ:- ಕೋಪರ್ನಿಕಸನ ಸಿದ್ಧಾಂತಕ್ಕಿಂತ ಮೊದಲು ಭೂಮಿ ಸೂರ್ಯನ ಸುತ್ತಲೂ ತಿರುಗುತ್ತದೆ ಎಂದು ತಪ್ಪಾಗಿ ತಿಳಿದಿದ್ದೆವು.

ಡಾ. ಹಾವನೂರರ ಪ್ರಕಾರ ಇಂತಹ ಸಂದರ್ಭಗಳಲ್ಲಿ ಸೂಕ್ತವಾದ ಸಂಶೋಧನೆ ನಡೆಯಬೇಕಿದೆ ಅಂದರೆ ಕಂಡು ಹಿಡಿಯುವುದರತ್ತ ಚಿತ್ತ ಬೆಳೆಯಬೇಕಿದೆ.

ಸಂಶೋಧನೆಯ ಸಂದರ್ಭದಲ್ಲಿ ಸಂಶೋಧಕನಿಗೆ ವಿವಿಧ ಶಿಸ್ತಿನ ಜ್ಞಾನ ಇರಬೇಕಾಗುತ್ತದೆ. ಅವು ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುತ್ತವೆ ಎನ್ನುತ್ತಾ ಇತರ ಸಂಶೋಧನಾ ಕ್ಷೇತ್ರದ ಮೂಲಭೂತ ತತ್ವಗಳು ಸಾಹಿತ್ಯ ಕ್ಷೇತ್ರಕ್ಕೆ ಹೇಗೆ ಅನ್ವಯವಾಗುತ್ತದೆ ಎಂಬುದನ್ನು ಈ ರೀತಿಯಾಗಿ ವಿವರಿಸುತ್ತಾರೆ.

ಸಂಶೋಧಕನಲ್ಲಿರಬೇಕಾದ ಮುಖ್ಯ ಗುಣ, ಪ್ರಥಮ ಅರ್ಹತೆ ಕುತೂಹಲ ಪ್ರವೃತ್ತಿ. ಏನು? ಏಕೆ? ಹೇಗೆ? ಈ ಮೂರು ಪ್ರಶ್ನೆಗಳು ಜೀವಂತವಾಗಿ ಹಗಲು ರಾತ್ರಿ ನಮ್ಮಲ್ಲಿ ಇರಬೇಕಾಗುತ್ತದೆ. ಇದರಿಂದಾಗಿ ವಿಷಯದ ಕುರಿತಾಗಿ ಮೈಯೆಲ್ಲಾ ಕಣ್ಣಾಗಿ ಕಿವಿಯಾಗಿ ಸದಾ ಎಚ್ಚರದ ಸ್ಥಿತಿಯಲ್ಲಿರಬಹುದಾಗಿದೆ. ಎಲ್ಲದಕ್ಕೂ ಮಿಡಿಯುವ ಸ್ಪಂದನಾಶೀಲತ್ವ ಬೆಳೆಯುತ್ತದೆ. ಇದು ಪ್ರಶ್ನೆಯನ್ನು ಹುಟ್ಟಿಸುತ್ತದೆ ಮತ್ತು ಉತ್ತರವನ್ನು ಕಂಡು ಹಿಡಿಯುಯಲು ಪ್ರೇರೇಪಣೆಯನ್ನೊದಗಿಸುತ್ತದೆ. ಉದಾ:-ಹಳೆಯ ಕವಿಗಳು ನೀಡಿದ 'ದಕ್ಷಿಣೋತ್ತರ ಮಾರ್ಗ' ಎಂದರೇನು ಬೇರೆ ಭಾಷೆಯಲ್ಲಿಲ್ಲದ ದ್ವಿತೀಯಾಕ್ಷರ ಪ್ರಾಸ ಕನ್ನಡಕ್ಕೆ ಏಕೆ ಬೇಕು? ಕಂದಪದ್ಯದಲ್ಲಿ ಆರನೇ ಸ್ಥಾನದಲ್ಲಿಯೇ ಜಗಣ ಯಾಕೆ ಬರಬೇಕು? ಜಾನಪದ ರಂಗಭೂಮಿಯಲ್ಲಿ ಯಕ್ಷಗಾನವೆಂಬ ಸಂಸ್ಕೃತ ಪದ ಏಕೆ ಬಂತು? ಹೇಗೆ ಬಂತು? ಈ ರೀತಿಯಾದ ಕುತೂಹಲಕಾರಿ ಪ್ರಶ್ನೆಗಳು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಬರಬಹುದು ಮತ್ತು ಬರಬೇಕು ಕೂಡ. ಒಂದು ವಿಷಯದ ಸುತ್ತ ಹಲವಾರು ಪ್ರಶ್ನೆಗಳು ತಲೆ ಎತ್ತಬೇಕು. ಕೊನೆಗೆ ಗಟ್ಟಿಯಾದ ಒಂದು ಪ್ರಶ್ನೆ ಉಳಿಯುತ್ತದೆ ಎಂಬುದು ಹಾವನೂರರ ಅಭಿಮತ.

ಎರಡನೆಯದಾಗಿ ಸಂಶೋಧಕನಿಗೆ ವೈಚಾರಿಕವಾಗಿ ಬೆಳೆಯಬೇಕು ಎನ್ನುವ ಸಹಜ ಪ್ರಜ್ಞೆ ಇರಬೇಕು. ಅಂದರೆ ವಿಷಯವೊಂದನ್ನು ಬಿಡಿಸುತ್ತಾ ಆಳವಾಗಿ ಒಳಹೊಕ್ಕು ನೋಡಬೇಕು. ಇದರಿಂದ ಹೊಸತನವನ್ನು ಕಂಡುಕೊಳ್ಳಬಹುದಾಗಿದೆ. ಇದನ್ನು ವ್ಯವಸ್ಥಿತ

ಶ್ರಮ ಎಂದು ಕರೆಯಬಹುದು. ಅಂದರೆ ಸಿಕ್ಕಿದ್ದನ್ನೆಲ್ಲಾ ಓದಿ ವಿಷಯ ಸಂಗ್ರಹ ಮಾಡಿಟ್ಟುಕೊಳ್ಳುವುದಲ್ಲ ಅಥವಾ ಯಾವುದೋ ಒಂದು ವಿಷಯವನ್ನು ಪಟ್ಟಾಗಿ ಹಿಡಿದು ಅದರ ಸಾಂಪ್ರದಾಯಿಕ ಜ್ಞಾನವನ್ನು ಕರತಲಾಮಲಕ ಮಾಡುವದೂ ಅಲ್ಲ. ಇದರಿಂದ ಹೊಸತನ್ನೇನು ಹೇಳಲಾಗದು. ಇದು ಅಗಲವಿಲ್ಲದ ಆಳವಾದ ಜ್ಞಾನವಾಗುತ್ತದೆ. ಸಂಶೋಧಕನ ಓದುವಿಕೆ, ಅಧ್ಯಯನ ಉದ್ದೇಶಬದ್ಧವಾಗಿರುತ್ತದೆ.ಯಾವುದೇ ಸಮಸ್ಯೆಯನ್ನು ತೆಗೆದುಕೊಂಡು ಬಿಡಿಸಿ ಪ್ರಚಲಿತ ಜ್ಞಾನಕ್ಕೆ ತಮ್ಮ ಕಾಣ್ಕೆಯನ್ನು ನೀಡುವತ್ತ ದೃಷ್ಟಿ ಇರುತ್ತದೆ.

ಮೂರನೆಯದಾಗಿ ಸಾಹಿತ್ಯ ಸಂಶೋಧನೆಯಲ್ಲಿ ಆಳವನ್ನು ಕಂಡುಕೊಳ್ಳುವಿಕೆ. ಇಲ್ಲಿ ಕಂಡುಕೊಳ್ಳುವ ಸತ್ಯ ವೈಯಕ್ತಿಕತೆಯನ್ನು ಬಿಟ್ಟು ಸಾರ್ವತ್ರಿಕತೆಯನ್ನು ಪಡೆಯಬೇಕಾಗುತ್ತದೆ. ಬುದ್ಧನ ಜ್ಞಾನೋದಯ, ಗಾಂಧೀಜಿಯ ಸತ್ಯಾನ್ವೇಷಣೆ ಇದು ವೈಯಕ್ತಿಕವಾಗಿದ್ದು ಸಾಹಿತ್ಯ ಸಂಶೋಧನೆಯಲ್ಲಿ ಹೀಗೆ ಆಗುವುದಿಲ್ಲ. ಇಲ್ಲಿ ಸಮಷ್ಟಿ ಕಾಣ್ಕೆ ಮುಖ್ಯ.

ಗ್ರಂಥಾಲಯ ವಾಚನ, ಕ್ಷೇತ್ರಕಾರ್ಯಗಳು ಸಾಹಿತ್ಯ ಸಂಶೋಧಕನಿಗೆ ಅತೀ ಅಗತ್ಯ ಎಂದು ಡಾ.ಹಾವನೂರರು ಒತ್ತಿ ಹೇಳಿದ್ದಾರೆ. ಇದನ್ನು ವ್ಯುತ್ಪತ್ತಿ ಎಂದು ಕರೆಯಬಹುದು. 'ಬಹುಜ್ಞತಾ ವ್ಯುತ್ಪತ್ತಿಃ' ಎಂದು ಕಾವ್ಯಮೀಮಾಂಸಕರು ವ್ಯಾಖ್ಯಾನಿಸಿದ್ದಾರೆ. 'ಸಂಶೋಧಕನಿಗೆ ಇದು ಅಧ್ಯಯನದಂಥ 'ಬೌದ್ಧಿಕ ಪರಿಶ್ರಮ' ಕ್ಷೇತ್ರಕಾರ್ಯಗಳಂಥ ದೈಹಿಕ ಪರಿಶ್ರಮಗಳಿಂದ ಸಾಧ್ಯವಾಗುವ ಸಂಪತ್ತು. ಸಾಮಾಜಿಕ ಸಂಪರ್ಕ, ವಿದ್ವಾಂಸರ ಸಮಾಗಮ, ನಿರಂತರ ಅಧ್ಯಯನ, ಅವಿಶ್ರಾಂತ ಸಂಶೋಧನ ಕ್ರಿಯೆ, ಇವುಗಳಿಂದ ಇದು ವರ್ಧಿಸುತ್ತಾ ಹೋಗುತ್ತದೆ ಎಂದು ಡಾ.ಎಂ.ಎಂ. ಕಲಬುರ್ಗಿಯವರು ಹೇಳುತ್ತಾರೆ'*.

ಆಧುನಿಕ ಯಂತ್ರ ಸಾಧನವಾದ ಕಂಪ್ಯೂಟರ್ ಸಾಹಿತ್ಯ ಸಂಶೋಧನೆಗೂ ಬಳಸಬಹುದಾಗಿದೆ ಎಂದು ಡಾ। ಹಾವನೂರರು ಹೇಳಿದ್ದಾರೆ ಮತ್ತು ಸಾಧಿಸಿದ್ದಾರೆ ಕೂಡ. ಮುದ್ದಣನ ಕೃತಿಗಳಲ್ಲಿನ ಮುಖ್ಯ ಪಾತ್ರ ಶ್ರೀರಾಮ. ಹಾಗಿದ್ದೂ ಶಿವನ ಹೆಸರನ್ನು ರಾಮನಿಗಿಂತ ಹೆಚ್ಚು ಬಾರಿ ಉಲ್ಲೇಖಿಸಿದ್ದಾನೆ. ಶಿವನ ಕುರಿತಾದ ಕೃತಿಗಳನ್ನು ಮುದ್ದಣ ರಚಿಸಿರದಿದ್ದರೂ ಈ ಅಚ್ಚರಿ ಹೇಗೆ ಉಂಟಾಯಿತು ಎಂಬುದನ್ನು ಹಾವನೂರರು ಕಂಪ್ಯೂಟರಿನ ಸಹಾಯದಿಂದ ಕಂಡುಕೊಂಡಿದ್ದಾರೆ. ಶಿವನೇ ಆತನಿಗೆ ಪ್ರಿಯವಾದ ದೇವರು ಎಂಬುದನ್ನು 'ಮುದ್ದಣ ಕಂಡ ಶಿವ' ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ.

ಸಾಹಿತ್ಯ ಸಂಶೋಧನೆಯು ಶೇ.೧೦೦ರಷ್ಟು ಕೃತಿನಿಷ್ಠವಾಗಿದ್ದು ಇತರ ಯಾವುದೇ ಶಾಸ್ತ್ರಕ್ಕಿಂತ ಭಿನ್ನವಾಗಿರುತ್ತದೆ. ಇದಕ್ಕಾಗಿ ಉಳಿದ ಕ್ಷೇತ್ರದ ಕಡೆಗೂ ಗಮನ ಹರಿಸಬೇಕಾಗುತ್ತದೆ ಎಂದು ಈ ರೀತಿಯಾಗಿ ಪಟ್ಟಿ ಮಾಡಿ ಹಾವನೂರರು ವಿವರಿಸುತ್ತಾರೆ.

**1. ವಿಜ್ಞಾನ ಸಂಶೋಧನೆ**

ವಿಜ್ಞಾನದಲ್ಲಿ ಗಣಿತ ಬಿಟ್ಟರೆ ಮೂಲಭೂತವಾಗಿ ಪದಾರ್ಥ ಮತ್ತು ಶಕ್ತಿ ಇವುಗಳ ಸಾಹಚರ್ಯ ಹಾಗೂ ಜೀವ ವಿಜ್ಞಾನ ಇವು ಮುಖ್ಯ ವಿಷಯಗಳಾಗಿ ಬರುತ್ತವೆ. ಇದು ಪೂರ್ಣವಾಗಿ ವಸ್ತುನಿಷ್ಠವಾಗಿದ್ದು ಪ್ರಯೋಗ ಶಾಲೆಯ ಅಗತ್ಯವೂ ಇರುತ್ತದೆ.

---

* ಡಾ.ಎಂ.ಎಂ.ಕಲಬುರ್ಗಿ, ಕನ್ನಡ ಸಂಶೋಧನಾ ಶಾಸ್ತ್ರ ೨೦೦೯, ಪುಟ ೧೪

**2. ಸಮಾಜಶಾಸ್ತ್ರ ಸಂಶೋಧನೆ**

ಇವು ಮನುಷ್ಯರ ಬಾಹ್ಯ ಬದುಕಿಗೆ ಸಂಬಂಧಿಸಿದವು. ಇಲ್ಲಿಯದೂ ಸಾಮಾಜಿಕ ಬದುಕಿಗೆ ನಿಷ್ಠವಾದುದು. ಇದರಲ್ಲಿ ವ್ಯಕ್ತಿಗತವಾದದ್ದು ಒಂದು ಭಾಗವಾದರೆ ಇನ್ನೊಂದು ಕೌಟುಂಬಿಕ, ಮತ್ತೊಂದು ನಾಗರಿಕ ಜೀವನಕ್ಕೆ ಅನ್ವಯಿಸುವಂತಹುದು. ಇಲ್ಲೂ ವಸ್ತುನಿಷ್ಠತೆ ಇರುತ್ತದೆ.

**3. ಮಾನವಿಕ ಶಾಸ್ತ್ರಗಳ ಸಂಶೋಧನೆ**

ಧರ್ಮ, ಕಲೆಗಳು ಮತ್ತು ಸಾಹಿತ್ಯ ಮಾನವಿಕ ಎಂದರೆ ಮನುಷ್ಯನ ಆಂತರಂಗಿಕ ಪ್ರತ್ಯಯಗಳು. ಇಲ್ಲಿ ವಿಷಯವು ಹೆಚ್ಚಾಗಿ ಸ್ವನಿಷ್ಠವಾಗಿ ಇರುತ್ತದೆ. ಸಾಹಿತ್ಯವನ್ನು ಸೃಜನ, ವಿಮರ್ಶನ ಮತ್ತು ಸಂಶೋಧನವೆಂದು ವರ್ಗೀಕರಿಸಬಹುದಾಗಿದ್ದು ಸೃಜನ ಪ್ರಕಾರಕ್ಕೆ ನೂರಿನ್ನೂರು ವರ್ಷಗಳ ಇತಿಹಾಸವಿದೆ. ಆದರೆ ವಿಮರ್ಶೆ ಮತ್ತು ಸಂಶೋಧನೆ ಇತ್ತೀಚಿನ ಶೈಕ್ಷಣಿಕ ಶಿಸ್ತು. ಸೃಜನಶೀಲ ಸಾಹಿತ್ಯದಲ್ಲಿ ಕವಿಯು ಸುತ್ತಲ ಜಗತ್ತಿನಿಂದ ವಸ್ತುವೊಂದನ್ನು ಆಯ್ದು ತನ್ನ ಕಲ್ಪನೆಯಂತೆ ಅದಕ್ಕೆ ರೂಪವನ್ನು ನೀಡುತ್ತಾನೆ. ಅದ್ದರಿಂದ ಇದು ಕರ್ತೃ ಪ್ರಧಾನ ಎಂದು ಕರೆಯಬಹುದು. ಸಂಶೋಧನೆಯಲ್ಲಿ ಕರ್ತೃವು ತನ್ನ ಇಚ್ಚೆಗನುಸಾರವಾಗಿ ನಡೆಯಲಾರ. ಆ ಸ್ವಾತಂತ್ರ್ಯ ಅವನಿಗಿರುವುದಿಲ್ಲ. ಆಕರಗಳಿಂದ ಪಡೆದ ಸಾಮಗ್ರಿಗನುಸಾರವಾಗಿ ಆತ ನಡೆಯಬೇಕಾಗಿರುವುದರಿಂದ ಅದು ವಸ್ತು ಪ್ರಧಾನವಾಗಿರುತ್ತದೆ. ವಿಮರ್ಶೆ ಮಾತ್ರ ಉಭಯ ಪ್ರಧಾನವಾಗಿರುತ್ತದೆ. ಇಲ್ಲಿ ವ್ಯಕ್ತಿಗೆ ತನ್ನ ವೈಯಕ್ತಿಕ ನಿಲುವನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯವಿದೆ. ಆದರೆ ವಸ್ತುವನ್ನು ಸಂಪೂರ್ಣ ವಾಗಿ ಮರೆಯಲಾರ ವಸ್ತುವನ್ನು ಅವಲಂಬಿಸಿಯೇ ನಿಲುವನ್ನು ವ್ಯಕ್ತಪಡಿಸಬಹುದು.

ಹಾವನೂರರ ಅಭಿಪ್ರಾಯದಂತೆ ಕೃತಿಯನ್ನು ವಿಮರ್ಶೆ ಮತ್ತು ಸಂಶೋಧನೆ ಎಂಬ ಎರಡು ಮಗ್ಗಲಿನಿಂದ ನೋಡಬಹುದು. ಉದಾಹರಣೆಗೆ ರಾ. ನರಸಿಂಹಾಚಾರ್ಯರು ಕವಿಚರಿತೆಯಲ್ಲಿ ಅನೇಕ ಕವಿಗಳ ಕಾಲ, ಕೃತಿಗಳ ಬಗ್ಗೆ ತಿಳಿಸಿದ್ದಾರೆ ಮಾತ್ರ. ಮೊದಲನೆಯ ದಾಗಿ ಈ ಕೆಲಸ ನಡೆದಿರುವುದರಿಂದಾಗಿ ಇದು ಸಂಶೋಧನೆಯ ಕೆಲಸ. ರಂ.ಶಿ.ಮುಗಳಿ ಯವರ ಕನ್ನಡ ಸಾಹಿತ್ಯ ಚರಿತ್ರೆ ಅನಂತರ ಬಂದಿದ್ದು, ಇದು ವಿಮರ್ಶೆಯ ಸದರಿಯಲ್ಲಿ ಬರುತ್ತದೆ. ಇಲ್ಲಿ ಸಂಶೋಧನ ಅಂಶ ತುಲನಾತ್ಮಕವಾಗಿ ಕಡಿಮೆ ಎಂಬುದಾಗಿ ಹಾವನೂರರು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಡಾ. ಎಂ. ಚಿದಾನಂದಮೂರ್ತಿಯವರು ಸಂಶೋಧನೆ ಮತ್ತು ವಿಮರ್ಶೆ ಒಂದಕ್ಕೊಂದು ಪೂರಕವಾಗಿರುತ್ತದೆ. ಯಾವುದು ಬೇಕಿದ್ದರೂ ಮೊದಲು ಬರಬಹುದು ಎನ್ನುತ್ತಾರೆ. ಅದನ್ನು ಹಾವನೂರರು ಒಪ್ಪುತ್ತಾರೆ ಮತ್ತು ಈ ಕೆಳಗಿನ ಉದಾಹರಣೆಯನ್ನು ನೀಡುತ್ತಾರೆ.

**ಸಂಶೋಧನೆಯಿಂದ ಹುಟ್ಟುವ ವಿಮರ್ಶೆ**

ಕವಿ ಮುದ್ದಣ 'ರಾಮೇಶ್ವಮೇಧ', 'ಅದ್ಭುತ ರಾಮಾಯಣಂ', ಶ್ರೀ ರಾಮಪಟ್ಟಾಭಿಷೇಕ'

ಎಂಬ ಮೂರು ರಾಮಾಯಣ ಗ್ರಂಥಗಳನ್ನು ಬರೆದಿರುವುದರಿಂದ ಅವನು ಉಪಯೋಗಿಸಿದ 'ರಾಮ' ಶಬ್ದಗಳು ಹೆಚ್ಚಿರಬೇಕು ಎಂದೆನಿಸುವುದು ಸಹಜ. ಆದರೇನು 'ರಾಮ' ಶಬ್ದದ ಎರಡು ಪಟ್ಟು ಶಿವವಾಚಿ ಶಬ್ದಗಳನ್ನು ಬಳಸಿದ್ದಾನೆ. ಇದು ಸಂಶೋಧನೆ. ಈ ಆಧಾರದ ಮೇಲೆ ಇವನು ಶಿವನನ್ನು ಇಷ್ಟೊಂದು ಸಲ ಏಕೆ ಸ್ತುತಿಸಿದ್ದಾನೆ. ಯಾವ ರೀತಿ ಶಿವನನ್ನು ತಂದಿದ್ದಾನೆ ಎಂದು ನೋಡಿದಾಗ. ಇವ ಅಪ್ಪಟ ಶಿವಭಕ್ತ ಎನ್ನುವುದು ತಿಳಿಯುತ್ತದೆ. ಎರಡನೆಯದಾಗಿ ಇವನು ಆರಾಧಿಸಿದ ಶಿವ ಮಂಗಲಕಾರಕ ಶಿವ; ಲಯಕಾರಿ ಶಿವ ಅಲ್ಲ ಎನ್ನುವುದನ್ನು ನೋಡುತ್ತೇವೆ. ಇಲ್ಲಿ ಸಂಶೋಧನೆಗೆ ಪೂರಕವಾಗಿ ವಿಮರ್ಶೆ ನೆರವಾಗಿದೆ.

## ವಿಮರ್ಶೆಯಿಂದ ಹುಟ್ಟುವ ಸಂಶೋಧನೆ

ಕರ್ಣನ ಚಿತ್ರವನ್ನು ಮೂಲತಃ ವ್ಯಾಸರು, ಅನಂತರ ಪಂಪ, ಕುಮಾರವ್ಯಾಸ. ಹೀಗೆ ಮೂವರು ಮಾಡಿದ್ದಾರೆ. ಈ ಮೂವರೂ ಯಾವ ಯಾವ ರೀತಿ ಕರ್ಣನನ್ನು ತಂದಿದ್ದಾರೆ ಎನ್ನುವುದಕ್ಕೆ ಅನೇಕ ವಿಮರ್ಶಾತ್ಮಕ ಲೇಖನಗಳು ಬಂದಿವೆ. ಅನಂತರ ಶಂ.ಬಾ.ಜೋಶಿಯವರು 'ಕರ್ಣನ ಮೂರು ಚಿತ್ರಗಳು' ಎಂಬ ಪುಸ್ತಕವನ್ನು ಸಂಶೋಧನೆಯ ದೃಷ್ಟಿಯಿಂದ ಬರೆದಿದ್ದು ವಿಮರ್ಶೆಯ ಅಂಶ ತೀರಾ ಗೌಣವಾಗಿದೆ.

ಹೀಗೆ ಸಾಹಿತ್ಯ ಸಂಶೋಧನೆ, ಸಾಹಿತ್ಯ ವಿಮರ್ಶೆ ಸ್ಥೂಲವಾಗಿ ಬೇರೆ ಕಂಡರೂ ಒಂದಕ್ಕೊಂದು ಪೂರಕವಾಗಿರುತ್ತದೆ ಎಂಬುದನ್ನು ಹಾವನೂರರು ಸಾಧಿಸುತ್ತಾರೆ.

ಡಾ. ಹಾವನೂರರ ಪ್ರಕಾರ ಇತರ ವಿಷಯಗಳಿಗೆ ಹೋಲಿಸಿದಾಗ ಸಾಹಿತ್ಯ ಸಂಶೋಧನೆ ಹೆಚ್ಚು ವ್ಯಾಪಕವಾಗಿರುತ್ತದೆ. ವಿಜ್ಞಾನದಂತಹ ವಿಷಯಗಳಲ್ಲಿ ಎಷ್ಟು ಆಳವಾಗಿ ಆ ವಿಷಯದ ಬಗ್ಗೆ ಹೋಗಲು ಸಾಧ್ಯವೋ ಅಷ್ಟು ಹೋಗಿ ನಂತರ ಒಂದು ಸತ್ಯವನ್ನು ಕಂಡುಕೊಳ್ಳುತ್ತಾರೆ. ಆದರೆ ಸಾಹಿತ್ಯದಲ್ಲಿ ಈ ರೀತಿಯ ಏಕಮುಖಿ ಅಧ್ಯಯನ ಸಾಧ್ಯವಾಗದು. ಸಾಹಿತ್ಯದಲ್ಲಿ 'ಅಂತರ್‌ಶಿಸ್ತೀಯ' ಸಾಹಚರ್ಯ ಬೇಕಾಗುತ್ತದೆ. ಸಾಹಿತ್ಯ ಸಂಶೋಧಕನಿಗೆ ಮನೋವಿಜ್ಞಾನ, ಇತಿಹಾಸ, ಕಲೆ, ಧರ್ಮ, ಸಾಮಾಜಿಕ ನಡವಳಿಕೆ ಇವೆಲ್ಲದರ ಪರಿಚಯ, ಸಾಹಚರ್ಯ ಬೇಕಾಗುತ್ತದೆ. ಸಾಹಿತ್ಯವು ಸಮಗ್ರ ಜೀವನವನ್ನು ಪ್ರತಿಬಿಂಬಿಸುತ್ತಿದ್ದು ಈ ಎಲ್ಲಾ ಅಂಶಗಳು ಅಡಕವಾಗಿರುತ್ತವೆ. ಕುಮಾರವ್ಯಾಸನ ಭಾರತವನ್ನು ತೆಗೆದುಕೊಂಡಾಗ ಅಲ್ಲಿ ಕೃಷ್ಣನ ಕತೆ. ಯುದ್ಧ ಉತ್ತರಕುಮಾರನ ಹಾಸ್ಯ ಹೀಗೆ ಹತ್ತು ಹಲವು ಸನ್ನಿವೇಶಗಳು ಬರುತ್ತವೆ. ಅಲ್ಲದೆ ಇವನ ಕಾವ್ಯದಲ್ಲಿ ಭಾಗವತ ಪಂಥ ಯಾವುದು? ಅವನ ಕಾಲದ ಸಾಮಾಜಿಕ ಜೀವನ ಹೇಗಿತ್ತು ಇತ್ಯಾದಿ ಅಂಶಗಳು ಅಧ್ಯಯನಕ್ಕೆ ಒಳಪಡುತ್ತವೆ.

ಸಮಾಜವೆನ್ನುವುದು ವೈವಿಧ್ಯಪೂರ್ಣ ಚಟುವಟಿಕೆಗಳ ಒಂದು ಸಂಸ್ಥೆ. ಇದರ ಪ್ರತಿಬಿಂಬವಾದ ಸಾಹಿತ್ಯದಲ್ಲಿಯೂ ವೈವಿಧ್ಯಪೂರ್ಣವಾದ ಅಂಶಗಳು ಸೇರಿಕೊಂಡಿರುತ್ತವೆ. ಹೀಗಾಗಿ ಸಾಹಿತ್ಯ ಕ್ಷೇತ್ರದ ವಿದ್ಯಾರ್ಥಿ ಬಹುಕ್ಷೇತ್ರಗಾಮಿಯಾಗುವುದು ಅಪೇಕ್ಷಣೀಯವಾಗಿದೆ. ಜಾನಪದದಿಂದ ಪ್ರಾರಂಭವಾಗಿ ಶಿಷ್ಟಪದವನ್ನು ಒಳಗೊಂಡು. ಪುರಾಣದ ವರೆಗೂ ಬೆಳೆದ ಶ್ರೀಶೈಲ ಮಲ್ಲಿಕಾರ್ಜುನ ದೇವತೆಯ ಅಧ್ಯಯನ ಬಹುಕ್ಷೇತ್ರೀಯವಾಗದಿದ್ದರೆ,

ಪೂರ್ಣತೆಯನ್ನು ಪಡೆಯುವುದೇ ಇಲ್ಲ. ಕ್ಷೇತ್ರಕಾರ್ಯ, ಗ್ರಂಥಾಲಯ, ಇವೆರೆಡರ ಪ್ರಯೋಗ ಇಲ್ಲಿ ಅವಶ್ಯ. ಆಚರಣೆ, ಜಾನಪದ ಸಾಹಿತ್ಯ, ಶಿಷ್ಟ ಸಾಹಿತ್ಯ, ಶಿಲ್ಪ, ಇತಿಹಾಸ, ಶಾಸನ, ಜನಾಂಗ ಇತ್ಯಾದಿಗಳು ನಾ ಮುಂದು ತಾ ಮುಂದು ಎಂದು ಈ ಅಂತರ್‌ಸಂಬಂಧಿ ಅಧ್ಯಯನಕ್ಕೆ ಆಕರವಾಗಿ ನಿಂತರೆ ಮಾತ್ರ ಸಂಶೋಧನೆ ಎಲ್ಲ ಮಗ್ಗಲುಗಳಲ್ಲಿಯೂ ಬಿಚ್ಚಿಕೊಳ್ಳುತ್ತದೆ.

ಹಾವನೂರರರ ಅಭಿಪ್ರಾಯದಂತೆ ಸಾಹಿತ್ಯ ಸಂಶೋಧನೆಯನ್ನು ಈ ಕೆಳಗಿನ ದೃಷ್ಟಿಕೋನಗಳಿಂದ ನಡೆಸಬಹುದಾಗಿದೆ.

೧. ಚಾರಿತ್ರಿಕ ದೃಷ್ಟಿ. ಉದಾ:ಬೆಟಗೇರಿ ಕೃಷ್ಣಶರ್ಮರ ಕನಕದಾಸರು ಕಂಡ ವಿಜಯನಗರ.
೨. ತೌಲನಿಕ ದೃಷ್ಟಿ – ಎರಡು ಕೃತಿಗಳು / ಎರಡು ಭಾಷೆಗಳ ಕೃತಿಗಳ ನಡುವಿನ ಹೋಲಿಕೆ.
೩. ಪುನರ್ ಮೌಲ್ಯಮಾಪನ – ಈ ಹಿಂದಿನ ಸಂಶೋಧನೆಯ ಮರುವಿಮರ್ಶೆ/ ಮುಂದುವರಿಕೆ.
೪. ಸಂಖ್ಯಾನ್ವಯದೃಷ್ಟಿ – ಡಾ। ಹಿರೇಮಲ್ಲೂರು ಈಶ್ವರನ್‌ರವರ ಹರಿಹರನ ಸಂಖ್ಯಾ ನಿರ್ಣಯ.
೫. ಶಬ್ದ ಮೂಲದ ಶೋಧ–ಮೊದಲ ಬಾರಿಗೆ ರಚಿತವಾದ ಶಬ್ದಕೋಶ.

**ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಂಶೋಧನೆ ಮಾಡುವ ಸಂಶೋಧಕರಿಗೆ ಡಾ. ಹಾವನೂರರು ನೀಡುವ ನಿರ್ದೇಶನ**

ಸಾಹಿತ್ಯ ಸಂಶೋಧನೆ ಮಾಡುವವರು ಹಳೆಗನ್ನಡ, ಹೊಸಗನ್ನಡ, ಕಾವ್ಯಶಾಸ್ತ್ರ, ಜಾನಪದ ಸಾಂಸ್ಕೃತಿಕ ವಲಯ ಇವುಗಳನ್ನು ತಿಳಿದಿರಬೇಕು. ಮೂಲಭೂತ ಆಕರಗಳನ್ನು ಗಮನಿಸಿರಬೇಕು. ಪೌರಾಣಿಕ ಗ್ರಂಥಗಳನ್ನು ಕಾವ್ಯಗಳನ್ನು ಓದಿರಬೇಕು. ಪಂಪಭಾರತ, ಕುಮಾರವ್ಯಾಸ ಭಾರತ, ರಾಜಶೇಖರ ವಿಳಾಸ ಈ ಮೂರನ್ನು ಮನನ ಮಾಡಿದ್ದರೆ, ಅವರು ನಿಜವಾಗಿ ಹಳಗನ್ನಡ ಸಾಹಿತ್ಯವನ್ನು ವಿಶೇಷವಾಗಿ ಅಧ್ಯಯನ ಮಾಡಿದವರು ಎಂದು ತಿಳಿಯಬಹುದು. ಧಾರ್ಮಿಕ ಗ್ರಂಥಗಳನ್ನು ಓದಿರಬೇಕು. ಜೈನಧರ್ಮ ಗ್ರಂಥದಲ್ಲಿ ಬರುವ ಜೈನ ಪಾರಿಭಾಷಿಕ ಭಾಷೆ ತಿಳಿದಿರಬೇಕು.

ನಮ್ಮ ಸಾಹಿತ್ಯದಲ್ಲಿ ಪ್ರತಿಫಲಿತಗೊಂಡ ವೀರಶೈವ ಧರ್ಮ ವಿಚಾರಗಳು ಅರ್ಥವಾಗ ಬೇಕಾದರೆ – ವೀರಶೈವ ಪಾರಿಭಾಷಿಕ ಭಾಷೆ ತಿಳಿದಿರಬೇಕು. ದ್ರಾವಿಡ ಭಾಷಾ ಸಾಹಿತ್ಯ ಗೊತ್ತಿರಬೇಕು. ಮೂಲ ಭಾಗವತವನ್ನು ಚೆನ್ನಾಗಿ ಅಭ್ಯಾಸ ಮಾಡದಿದ್ದರೆ ದಾಸ ಸಾಹಿತ್ಯದ ಮರ್ಮಗಳನ್ನು ತಿಳಿಯಲು ಆಗುವುದಿಲ್ಲ. ಅರುವತ್ತಮೂರು ಪುರಾತನರ ಬಗ್ಗೆ ತಿಳಿಯದಿದ್ದರೆ ಹರಿಹರನ ರಗಳೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲ. ದಾರ್ಶನಿಕ ಸಾಹಿತ್ಯವೂ ಬೇಕಾಗುತ್ತದೆ. ಇತರ ಮಾನವಿಕ ವಿಷಯಗಳು, ಸಮಾಜಶಾಸ್ತ್ರ, ಮನೋವಿಜ್ಞಾನಕ್ಕೆ ಸಂಬಂಧಪಟ್ಟ ವಿಷಯಗಳು ಇವು ಹೊಸಗನ್ನಡ ಸಾಹಿತ್ಯದ ಅಭ್ಯಾಸ ಮಾಡುವಾಗ ತಿಳಿದಿರಬೇಕಾಗುತ್ತದೆ.

ಸಂಶೋಧನಾ ವಿಷಯಗಳನ್ನು ಆರಿಸಿಕೊಳ್ಳುವಾಗ ಆ ವಿಷಯದ ಬಗ್ಗೆ ಹಲವಾರು ತಿಂಗಳು ವಿಚಾರ ಮಾಡಿರಬೇಕು. ಅದರ ಆಕರಗಳೇನು? ಅದರ ವ್ಯಾಪಕತೆ ಎಷ್ಟಿದೆ ಎಂದು ತಿಳಿದಿರಬೇಕು.

ಡಾ. ಹಾವನೂರರ ಪ್ರಕಾರ ಆಧುನಿಕ ಉಪಕರಣವಾದ ಕಂಪ್ಯೂಟರನ್ನು ಕನ್ನಡ ಸಾಹಿತ್ಯ ಸಂಶೋಧನೆಗೆ ಬಳಸಬೇಕು. ಇದರಿಂದ ಅನೇಕ ಸಮಸ್ಯೆಗಳನ್ನು ಪರಿಹರಿಸ ಬಹುದು. ಸಾಹಿತ್ಯ ಸಂಶೋಧನೆ ಕೃತಿಮೂಲವಾಗಿರುವುದರಿಂದ ಪಠ್ಯವನ್ನು ಕಂಪ್ಯೂಟರ್‌ಗೆ ಉಣಿಸಬೇಕು. ಬಳಿಕ ವಿವಿಧ ಪ್ರಕಾರಗಳನ್ನು ಮಾಡಿಕೊಳ್ಳುವುದು ಸಾಧ್ಯವಾಗುತ್ತದೆ. ಯಾವ ಪದವನ್ನು ಯಾವ ಕಾರಣದಿಂದ ಬಳಸಲಾಗಿದೆ ಎಂದು ತಿಳಿಯುವುದರ ಮೂಲಕ ಹೊಸ ಹೊಳಹುಗಳು ಹೊಮ್ಮುವುವು. ಪದಗಳ ಮೂಲಕ ಕೃತಿಯನ್ನು ಅಧ್ಯಯನ ಮಾಡುವುದಕ್ಕೆ ಕಂಪ್ಯೂಟರ್ ಬಳಕೆ ತುಂಬಾ ಹೊಂದಿಕೊಳ್ಳುತ್ತದೆ.

## ಡಾ। ಹಾವನೂರರು ಸಂಶೋಧನೆ ಮಾಡುತ್ತಿದ್ದ ರೀತಿ

ಡಾ. ಶ್ರೀನಿವಾಸ ಹಾವನೂರರು ಕನ್ನಡದ ಪ್ರಸಿದ್ಧ ಸಂಶೋಧಕರಲ್ಲಿ ಒಬ್ಬರಾಗಿ ಮೂಡಿಬಂದುದರ ಹಿನ್ನೆಲೆಯಲ್ಲಿ ಅವರ ಅಪಾರವಾದ ಶ್ರಮ, ಹೊಸತನವನ್ನು ಕಾಣುವ ಹಂಬಲ, ಚಿಕಿತ್ಸಕ ದೃಷ್ಟಿಕೋನ, ವೈಜ್ಞಾನಿಕವಾದ ನಡೆ, ಜ್ಞಾನದಾಹ ಇತ್ಯಾದಿ ಗುಣಗಳು ಪ್ರಮುಖವಾಗಿ ಕೆಲಸ ಮಾಡಿದ್ದು ಇಲ್ಲಿ ಅವುಗಳ ಬಗ್ಗೆ ಚರ್ಚಿಸಲಾಗಿದೆ.

ಸಾಹಿತ್ಯದ ಸಂಶೋಧನೆಯು ಗತಕಾಲದ ವಿಷಯದ ಕುರಿತಾದ ಅನ್ವೇಷಣೆಯಾಗಿದ್ದು, ಇದಕ್ಕೆ ಮುಖ್ಯವಾಗಿ ಬೇಕಾಗಿರುವುದು ಗತಕಾಲದ ಆಕರ ಸಾಮಗ್ರಿಗಳು. ಸಂಶೋಧನೆಯ ಫಲಿತಾಂಶವು ಆಕರಗಳ ಪ್ರಮಾಣವನ್ನು ಅವಲಂಬಿಸಿರುತ್ತದೆ. ಆಕರಗಳು ಅಧಿಕಗೊಂಡಷ್ಟು ಫಲಿತಾಂಶವು ಉತ್ತಮಗೊಳ್ಳುತ್ತದೆ. ಹಾವನೂರರು ತಾನು ಆಯ್ದುಕೊಂಡ ವಸ್ತು, ವಿಷಯ ಯಾವುದೇ ಇರಲಿ ಅದರ ಆಕರಗಳನ್ನು ಬೆನ್ನು ಹಿಡಿದು ಸಾಗುವುದರಲ್ಲಿ ನಿಸ್ಸೀಮರು. ಅದರಲ್ಲೂ ಅವರು ಅನುಷಂಗಿಕ ಆಕರಗಳನ್ನು ಎಂದೂ ನೆಚ್ಚಿಕೊಳ್ಳುತ್ತಿರಲಿಲ್ಲ.

ಹಾವನೂರರು ತನ್ನ ಸಂಶೋಧನ ಪ್ರಬಂಧಕ್ಕಾಗಿ ಆಯ್ದುಕೊಂಡದ್ದು ಅತ್ಯಂತ ಕ್ಲಿಷ್ಟಕರವಾದ ೧೯ನೇ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆಯನ್ನು, ಇದು ಅತ್ಯಂತ ಯಶಸ್ವಿ ಅಧ್ಯಯನವಾಗಿದ್ದು 'ಹೊಸಗನ್ನಡದ ಅರುಣೋದಯ' ಮೌಲಿಕವಾದ ನಿಬಂಧವಾಗಿ ಮೂಡಿಬಂದಿದೆ. ಇದರ ಆಕರಗಳಿಗಾಗಿ ನಾಡಿನಾದ್ಯಂತ ಸಂಚರಿಸಿದ್ದಲ್ಲದೆ ಹಲವಾರು ಸಲ ವಿದೇಶಕ್ಕೂ ಭೇಟಿ ನೀಡಿದ್ದರು. ಅವರ ವಿದೇಶ ಯಾತ್ರೆಗಳಲ್ಲಿ ಬಾಸೆಲ್, ಬ್ರಿಟನ್, ಜರ್ಮನಿ, ಫ್ರಾನ್ಸ್, ಹಾಲೆಂಡ್, ಅಮೇರಿಕಾ ದೇಶಗಳು ಒಳಗೊಂಡಿದೆ. ಹಾಗೆ ಭೇಟಿಕೊಟ್ಟಾಗ ತನ್ನ ಸಮಯವನ್ನು ಲೈಬ್ರರಿಗಳಲ್ಲಿ ಮ್ಯೂಸಿಯಂಗಳಲ್ಲಿಯೇ ಕಳೆಯುತ್ತಿದ್ದರು. ಹಣಗಳನ್ನು ಫೋಟೋಪ್ರತಿಗಳಿಗಾಗಿಯೇ ವಿನಿಯೋಗಿಸುತ್ತಿದ್ದರು. ಇದರಿಂದಾಗಿ ವಿದೇಶಗಳ ಪ್ರೇಕ್ಷಣೀಯ ಸ್ಥಳವನ್ನು ನೋಡುವುದಕ್ಕೆ ಸಮಯವಾಗಲೀ ವಿಶೇಷ ವಸ್ತುವನ್ನು ಕೊಂಡುಕೊಳ್ಳುವುದಕ್ಕೆ ಹಣವಾಗಲೀ ಉಳಿಯುತ್ತಿರಲಿಲ್ಲ.

ಹೊಸ ಸತ್ಯವನ್ನು ಕಾಣುವುದು ಸುಲಿದ ಬಾಳೆಯ ಹಣ್ಣಿನಂತೆ ಅಲ್ಲ ಅದರ ಸುತ್ತಮುತ್ತ

ನಡೆದು, ಓಡಿ, ಕುಳಿತು, ನಿಂತು, ತೆವಳಿ ಒದ್ದಾಡಬೇಕು ಎಂಬುದು ಹಾವನೂರರ ಅಭಿಮತ ಮತ್ತು ಹಾಗೆ ನಡೆದು ಸಾಧಿಸಿದರು ಕೂಡ. ಸಂಶೋಧನೆಯ ಸಂದರ್ಭದಲ್ಲಿ ಹಾವನೂರರು ಇರುವೆಯಂತೆ ಸದಾ ಚಲಿಸುತ್ತಾ, ಕೂಡಿ ಹಾಕುತ್ತಾ ಸಾಗುವವರು; ಕ್ರಿಯಾಶೀಲವಾದ ಗಡಿಯಾರಕ್ಕೆ ಸವಾಲು ಹಾಕುವವರು.

ಹಠಮಾರಿಯಾಗಿ, ಛಲವಾದಿಯಾಗಿ ಹಿಡಿದ ಕೆಲಸವನ್ನು ಮಾಡಿ ಮುಗಿಸುವುದು ಹಾವನೂರುತನ. ರಾತ್ರಿ ಕೇವಲ ಮೂರು ತಾಸುಗಳ ಕಾಲ ನಿದ್ದೆ ಮಾಡಿ ಉಳಿದ ಸಮಯ ಅಧ್ಯಯನ, ಸಂಶೋಧನೆಯಲ್ಲಿ ತೊಡಗುತ್ತಿದ್ದುದು ಹಾವನೂರರ ಅಭ್ಯಾಸ. ಬಾಸೆಲ್‌ಗೆ ಭೇಟಿ ನೀಡಿದ ಸಂದರ್ಭದಲ್ಲಿ ಇರುವ ಸಮಯದಲ್ಲಿ ಸಾಕಷ್ಟು ಅಧ್ಯಯನ ಮಾಡಿ ಮುಗಿಸುವ ಧಾವಂತದಲ್ಲಿದ್ದ ಹಾವನೂರರು ತನ್ನ ಆರೋಗ್ಯವನ್ನು ಲೆಕ್ಕಿಸುತ್ತಿರಲಿಲ್ಲ. ಆಸ್ಪತ್ರೆಯ ಹಾಸಿಗೆಯಿಂದೆದ್ದು ಮುದ್ರಣಾಲಯಕ್ಕೆ ಪ್ರೂಫ್ ನೋಡಲು ಹೋಗುತ್ತಿದ್ದರು. ಔಷಧಿ ನುಂಗಿ ಗ್ರಂಥಾಲಯದಲ್ಲಿ ಕುಳಿತುಕೊಳ್ಳುತ್ತಿದ್ದರು.

ಬೇರೆಯವರ ಸಮಯವನ್ನು ಹಾಳು ಮಾಡುವವರೂ ಅಲ್ಲ; ಅದೇ ರೀತಿ ತನ್ನ ಸಮಯವನ್ನು ಬೇರೆಯವರು ಹಾಳು ಮಾಡುವುದಕ್ಕೂ ಹಾವನೂರರು ಅವಕಾಶ ನೀಡುತ್ತಿರಲಿಲ್ಲ. ಫೋನ್‌ನಲ್ಲಿ ಮಾತನಾಡುವಾಗ ಅಗತ್ಯದ ವಿಷಯ ಮುಗಿಯಿತು ಎಂದಾಕ್ಷಣ ಎದುರಿನವರು ಮಾತನಾಡುತ್ತಿದ್ದಂತೆಯೇ ರಿಸೀವರನ್ನು ಕೆಳಗಿಡುತ್ತಿದ್ದರು.

ಹಾವನೂರರು ವಿವಿಧ ಭಾಷೆಗಳ, ವಿವಿಧ ಪ್ರದೇಶಗಳ ಮಿತ್ರರನ್ನು ತನ್ನ ಆಪ್ತವಲಯ ದಲ್ಲಿ ಇರಿಸಿಕೊಂಡಿದ್ದರು. ಇದರಿಂದ ಮಾಹಿತಿಯನ್ನು ಸಂಗ್ರಹಿಸಿಕೊಳ್ಳುವುದು ಸುಲಭ ವಾಗುತ್ತಿತ್ತು. 'ಚಂಚು ಪ್ರವೇಶ' ಎಂಬ ಪದ ಹಾವನೂರರಿಗೆ ತುಂಬಾ ಪ್ರಿಯವಾಗಿತ್ತು. ಅಂದರೆ ಸಾಮಗ್ರಿ ಮತ್ತು ನೆರವನ್ನು ತನ್ನಿಂದ ಸಾಧ್ಯವಾದಷ್ಟು ಉಳಿದವರಿಗೆ ನೀಡಿ ಸಹಾಯ ಮಾಡುವುದು ಮತ್ತು ಅವರಿಂದ ತನಗೆ ಬೇಕಾದಷ್ಟು ಪಡೆದುಕೊಳ್ಳುವುದು ಹಾವನೂರರ ಸ್ವಭಾವ.

ಏಕಕಾಲಕ್ಕೆ ಎರಡು-ಮೂರು ವಿಷಯಗಳನ್ನು ಹಿಡಿದು ಸಾಗುತ್ತಿದ್ದರು. ವಿಷಯಗಳನ್ನು ನಿರ್ವಹಿಸುವಾಗ ಎಲ್ಲಿಯೂ ಉದ್ವೇಗಕ್ಕೆ ಒಳಗಾಗದೆ, ನಿಷ್ಠೆಯಿಂದ ಕೆಲಸವನ್ನು ನಿರ್ವಹಿಸುವ ಕಲೆ ಹಾವನೂರರಿಗೆ ಸಿದ್ಧಿಸಿತ್ತು. ದೇಶ ವಿದೇಶಗಳಿಂದ, ವಿವಿಧ ಜ್ಞಾನ ಕೇಂದ್ರಗಳಿಂದ, ಗ್ರಂಥಾಲಯಗಳಿಂದ, ಪ್ರಾಚೀನ ಗ್ರಂಥರಾಶಿಗಳಲ್ಲಿ ಹುದುಗಿಸಿದ್ದ ಕನ್ನಡ ವಾಙ್ಮಯಕ್ಕೆ ಸಂಬಂಧಿಸಿದ ಅಪೂರ್ವ ಮಾಹಿತಿಗಳನ್ನು ಸಂಗ್ರಹಿಸಿ ದಾಖಲೆಗಳನ್ನು ಒಪ್ಪವಾಗಿ, ಓರಣವಾಗಿ, ವೈಜ್ಞಾನಿಕವಾಗಿ ವ್ಯವಸ್ಥೆ ಮಾಡುವುದರಲ್ಲಿಯೂ ಹಾವನೂರರು ನಿಸ್ಸೀಮರಾಗಿದ್ದರು.

ಯಾವುದೇ ಕೆಲಸಕ್ಕೆ ತೊಡಗುವುದಕ್ಕೆ ಮುಂಚಿತವಾಗಿ ವೈಜ್ಞಾನಿಕವಾದ ಪೂರ್ವಸಿದ್ಧತೆಯನ್ನು ಮಾಡುವುದು ಹಾವನೂರರ ಅನುಕರಣೀಯ ಕಾರ್ಯ ವಿಧಾನ. ತಾನು ಕಂಡುಕೊಂಡ ವಿಷಯಗಳನ್ನು ಬರೆದಿಡುವುದಕ್ಕಾಗಿ ಪ್ರತ್ಯೇಕವಾದ ಕಾರ್ಡುಗಳನ್ನು ತಯಾರಿಸುವುದು, ಫೈಲುಗಳನ್ನು ನಿರ್ಮಾಣ ಮಾಡುವುದು. ಕೆಲಸದ ಯಾದಿ ತಯಾರಿ, ಕಾರ್ಯಕಾಲ ಸೂಚಿ, ಹಂತಗಳು ಇವನ್ನೆಲ್ಲಾ ವ್ಯವಸ್ಥಿತವಾಗಿ ಸಂಘಟಿಸುತ್ತಿದ್ದುದು ಹಾವನೂರರ

ಸಂಶೋಧನೆಯಲ್ಲಿ ಎದ್ದು ಕಾಣುವ ಅಂಶಗಳು.

ಎಲ್ಲಿ ಯಾವುದೇ ವಿಷಯಕ್ಕೆ ಸಂಬಂಧಿಸಿದ ಪ್ರಮುಖ ದಾಖಲೆಗಳು, ಅಂಕಣಗಳು ಪತ್ರಿಕೆಯಲ್ಲಿ ಬಂದ ಕೂಡಲೇ ಅದನ್ನು ಕತ್ತರಿಸಿ ಇಡುವುದು ಹಾವನೂರರ ಅಭ್ಯಾಸ. ಒಬ್ಬ ವ್ಯಕ್ತಿಯ ಈಗಿನ ಸಾಧನೆಯನ್ನು ನೋಡಿ ಆ ವ್ಯಕ್ತಿ ಮುಂದೇನಾಗಬಹುದುದೆಂದು ಊಹಿಸಬಲ್ಲ ಶಕ್ತಿ ಅವರಿಗಿತ್ತು. ಅಂತಹ ವ್ಯಕ್ತಿಗಳ ವಿಶೇಷ ಮಾಹಿತಿಗಳನ್ನು ಕಲೆ ಹಾಕಿ ಮುಂದೆ ಅದನ್ನು ಬಳಸಿಕೊಳ್ಳುತ್ತಿದ್ದರು. ಅಥವಾ ಬೇಕಾದವರಿಗೆ ಕೊಡುತ್ತಿದ್ದರು.

ಹಾವನೂರರು ನಿರಂತರವಾದ ಪ್ರವಾಸಗಳನ್ನು ಕೈಗೊಳ್ಳುತಿದ್ದರು. ಟ್ರೇನ್‌ಗಿಂತ ಹೆಚ್ಚಾಗಿ ಬಸ್ಸುಗಳಲ್ಲೇ ಸಾಗುತ್ತಿದ್ದರು. ಮೈಯೆಲ್ಲಾ ಕಣ್ಣಾಗಿ, ಕಿವಿಯಾಗಿಸುತ್ತಿದ್ದ ಹಾವನೂರರಿಗೆ ಆ ಮೂಲಕ ನಾಡುನುಡಿಯನ್ನು ಗುರುತಿಸುವುದು ಸಾಧ್ಯವಾಗುತ್ತಿತ್ತು.

ಉದಾ :– ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್........

ಇಲ್ಲಿ ಪ್ರಯೋಗ ಪದದ ಅರ್ಥವೇನೆಂದು ತಿಳಿಯುವ ಕುತೂಹಲ. ಅನ್ವೇಷಿಸುತ್ತಿದ್ದ ಹಾವನೂರರಿಗೆ ಒಂದು ಮನೆಯಲ್ಲಿ ಈ ರೀತಿ ಮಾತನಾಡುವುದು ಕೇಳಿಸಿತು. 'ಮಂತ್ರ ಕಲಿತು ಆಗಿದೆ ಪ್ರಯೋಗ ಆಗಿಲ್ಲ' ಇದರಿಂದ ಪ್ರಯೋಗ ಅಂದರೆ ವಾಚನ ಎಂದು ಅರ್ಥ ಎನ್ನುವ ತೀರ್ಮಾನಕ್ಕೆ ಬಂದರು.

ಒಮ್ಮೆ ಹಾವನೂರರು ಇತಿಹಾಸ ಸಂಶೋಧಕರಾದ ಶ್ರೀ ರಾಜ ಪುರೋಹಿತರು ತೀರಿಕೊಂಡಾಗ ಅವರ ಮನೆಗೆ ಹೋಗಿದ್ದವರು ಅವರ ಮೂವತ್ತೈದು ವರ್ಷಗಳ ಡೈರಿಯನ್ನು ತಿರುವಿ ಹಾಕಿದರು. ಅದರಲ್ಲಿಯ ಅವರ ಒಕ್ಕಣಿಕೆ ಹೀಗಿದ್ದಿತು. "ಇವತ್ತು ರಾತ್ರಿ ಊಟಕ್ಕೆ ಏನೂ ಇರಲಿಲ್ಲ. ಬರಿ ನೀರನ್ನು ಕುಡಿದೆ. ಮಲಗುವ ಮುಂಚೆ ಕಣ್ವಾಯನ". ಆಗ ಆ ಶಬ್ದದಲ್ಲಿ ಬಂದ "ಆಯನ" ಪದ ಅಲ್ಲಿ ಯಾಕೆ ಬಂತು ಎಂದು ಯೋಚಿಸುತ್ತಾ ಆ ರಾತ್ರಿ ಮಲಗಿದರು. ಮುಂದೆ ಅದಕ್ಕೆ ಉತ್ತರ ಸಿಗುವವರೆಗೆ ಅವರ ಹುಡುಕಾಟ ಮುಂದುವರಿಯುತ್ತದೆ.  ಸಂಶೋಧನೆಯ ಬಗ್ಗೆ ಹಾವನೂರರಿಗಿದ್ದ ಇಂತಹ ಬದ್ಧತೆಯೇ ಈ ಕ್ಷೇತ್ರದಲ್ಲಿ ಅವರನ್ನು ಇಷ್ಟು ಎತ್ತರಕ್ಕೆ ಏರಿಸಿತ್ತು, ಮತ್ತು ಅವರ ಜೊತೆಗೆ ದುಡಿಯುವವರಲ್ಲಿ ಇಂತಹ ಗುಣವನ್ನು ಮೈಗೂಡಿಸಿತ್ತು.

## ಹಾವನೂರರು ಕಂಡ ಮುಖ್ಯ ಹೊಳಹುಗಳು

ಬದುಕಿನುದ್ದಕ್ಕೂ ಹೊಸತನ್ನು ಕಾಣುವ ಮತ್ತು ಕಾಣಿಸುವ ಕಾಯಕದಲ್ಲಿ ನಿತ್ಯ ನಿರತರಾಗಿದ್ದ ಹಾವನೂರರಿಗೆ ಬದುಕೇ ಒಂದು ಸಂಶೋಧನೆಯಾಗಿತ್ತು. ಹಾಗೆ ಕಂಡುಕೊಂಡ ಸತ್ಯವನ್ನು ಖಚಿತವಾಗಿ, ಪಾರದರ್ಶಕವಾಗಿ, ವಸ್ತುನಿಷ್ಠವಾಗಿ ಮತ್ತು ಧೈರ್ಯವಾಗಿ ಬಿಚ್ಚಿಡುತ್ತಿದ್ದರು. ಪ್ರಸ್ತುತ ಡಾ.ಹಾವನೂರರು ಸಂಶೋಧನೆಯ ಹಾದಿಯಲ್ಲಿ ಕಂಡುಕೊಂಡ ಮುಖ್ಯ ಹೊಳಹುಗಳನ್ನು ಚರ್ಚಿಸಲಾಗಿದೆ.

### ಇತಿಹಾಸ

ಡಾ. ಹಾವನೂರರು ಮೂಲತಃ ಸಾಹಿತ್ಯ ಸಂಶೋಧಕರಾಗಿದ್ದರೂ ಇತಿಹಾಸದ ಕಡೆಗೂ ಅಪಾರವಾದ ಒಲವು ಹೊಂದಿದ್ದರು. ಅವರೇ ಹೇಳುವಂತೆ ಅವರಿಗೆ ಸಾಹಿತ್ಯ ಸಂಶೋಧನೆ ಧರ್ಮಪತ್ನಿಯ ಸ್ಥಾನದಲ್ಲಿದ್ದರೆ ಇತಿಹಾಸ ಪ್ರಿಯತಮೆಯ ಸ್ಥಾನದಲ್ಲಿದೆ. ಈ ಪ್ರಿಯತಮೆಯ ಬೆನ್ನು ಹತ್ತಿ ಸಾಕಷ್ಟು ದೂರ ಸಾಗಿದ್ದಾರೆ. ಮತ್ತು ಹಲವು ಹೊಸತನ್ನು ಕಂಡುಕೊಂಡಿದ್ದಾರೆ. ಅವುಗಳಲ್ಲಿ ಮುಖ್ಯ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ.

**ಕಿತ್ತೂರಿನ ಕಿರಿಯ ರಾಣಿ ವೀರಮ್ಮ**

ಕರ್ನಾಟಕದ ಇತಿಹಾಸದಲ್ಲಿ ಕಿತ್ತೂರಿನ ರಾಣಿ ಚೆನ್ನಮ್ಮನ ಧೀರ, ಸಾಹಸ, ನಾಡ ಪ್ರೇಮದ ಕಥೆಗಳು ಮನೆ ಮಾತಾಗಿದೆ. ಆದರೆ ಅವಳ ಜೊತೆಗಿದ್ದ ನಾಡೊಲವಿ ಕಿರಿಯ ರಾಣಿ ವೀರಮ್ಮನ ಇತಿಹಾಸ ಮಸುಕಾಗಿಯೇ ಉಳಿದಿದೆ. ಡಾ। ಹಾವನೂರರು ಈಗಾಗಲೇ ಬೆಳಕಿಗೆ ಬಂದಿರುವ ಬ್ರಿಟೀಶ್ ದಾಖಲೆಗಳು ಮತ್ತೆ ಲಾವಣಿ ಸಾಹಿತ್ಯದ ಆಕರಗಳ ಜೊತೆಗೆ ಹೊಸತಾಗಿ ಹಲವು ದಾಖಲೆಗಳನ್ನು ಶೋಧಿಸಿ, ಕಿತ್ತೂರಿನ ಈ ಕಿರಿಯ ರಾಣಿಯ ಸಾಹಸಗಾಥೆಯನ್ನು ಸಮರ್ಪಕವಾಗಿ ಕಟ್ಟಿಕೊಟ್ಟಿದ್ದಾರೆ.

ಕಿತ್ತೂರಿನ ಶಿವಲಿಂಗ ರುದ್ರನ ಪತ್ನಿಯಾದ ಈ ವೀರಮ್ಮ ಹುಮ್ನಾಬಾದಿನ (ಈಗಿನ ಬೀದರ್ ಜಿಲ್ಲೆ) ಓರ್ವ ಸೆಟ್ಟಿಯ ಮಗಳು ಎಂಬುದನ್ನು ಸಬ್ ಕಲೆಕ್ಟರ್ ವಾಲ್ಟರ್ ಎಲಿಯಟ್‌ನ ಸ್ಮರಣಸಂಚಿಕೆಯ ಆಧಾರದಿಂದ ಕಾಣಿಸಿದ್ದಾರೆ. ಹಾಗೆಯೇ ೧೪ನೇ ಸೆಪ್ಟೆಂಬರ್ ತಿಂಗಳ ೧೮೨೪ರಂದು ಕಲೆಕ್ಟರ್ ಥ್ಯಾಕರೇ ಬರೆದ ಪತ್ರದ ಆಧಾರದಿಂದ ಶಿವಲಿಂಗನು ಸತ್ತಾಗ ವೀರಮ್ಮನಿಗೆ ಕೇವಲ ಹನ್ನೊಂದು ವರ್ಷ ವಯಸ್ಸಾಗಿತ್ತು ಎಂದು ಕಂಡುಕೊಂಡಿದ್ದಾರೆ. ಆದರೆ ಇವರು ಮಲ್ಲಸರ್ಜನನ್ನು ದತ್ತು ಪುತ್ರನನ್ನಾಗಿಸಲು ಕಾರಣವೇನೆಂದು ತರ್ಕಿಸಿದಾಗ ಅವರ ನೆರವಿಗೆ ಬಂದದ್ದು ಎಲಿಯಟ್ಟನ ದಾಖಲೆ. ಇದರ ಪ್ರಕಾರ ಶಿವಲಿಂಗನಿಗೆ ಈ ಹಿಂದೆ ಎರಡು ಮದುವೆಯಾಗಿದ್ದು ಮಕ್ಕಳು ಇರಲ್ಲ. ಆದ್ದರಿಂದ ಹಾವನೂರರು ಈ ತೀರ್ಮಾನಕ್ಕೆ ಬರುತ್ತಾರೆ. ವೀರಮ್ಮನಿಗೆ ಹನ್ನೊಂದು ವರ್ಷವಾಗಿದ್ದು ಬಾಲೆಯಾಗಿದ್ದ ಅವಳಿಗೆ ಮಕ್ಕಳಾಗುವುದಿಲ್ಲ ಎಂದು ತರ್ಕಿಸುವುದಕ್ಕೆ ಸಾಧ್ಯವಾಗದು, ಶಿವಲಿಂಗನು ತನಗೇ ಮಕ್ಕಳಾಗದೆಂದು ನಿರ್ಧರಿಸಿರಬಹುದೆಂದು ಊಹಿಸುತ್ತಾರೆ.

ಶಿವಲಿಂಗನ ಮರಣಾ ನಂತರ ವೀರಮ್ಮನನ್ನು ಒಬ್ಬಳನ್ನು ಅರಮನೆಯಲ್ಲಿ ಉಳಿಸಿ ಪರಿವಾರವನ್ನೆಲ್ಲಾ ಪರ ಊರಿಗೆ ಅಟ್ಟಲು ಆಜ್ಞಾಪಿಸುತ್ತಾರೆ. ಇದರ ಹಿಂದಿನ ಉದ್ದೇಶ ವೀರಮ್ಮ ದತ್ತು ಪುತ್ರನನ್ನು ಸ್ವೀಕರಿಸದಿರುವಂತೆ ಮನವೊಲಿಸುವುದೇ ಆಗಿತ್ತು ಎಂಬುದನ್ನು ಹಾವನೂರರು ಕಂಡುಕೊಳ್ಳುತ್ತಾರೆ.

ಕಿತ್ತೂರಿನ ಪತನಾನಂತರ ಮೂವರೂ ವಿಧವೆ ರಾಣಿಯರಾದ ಕಿತ್ತೂರರಾಣಿ ಚೆನ್ನಮ್ಮ (ವೀರಮ್ಮನ ಅತ್ತೆ), ಜಾನಕಿ (ಚೆನ್ನಮ್ಮನ ಹಿರಿಯ ಸೊಸೆ) ಮತ್ತು ವೀರಮ್ಮರು ಬೈಲಹೊಂಗಲದಲ್ಲಿ ಗೃಹಬಂಧನಕ್ಕೆ ಒಳಗಾಗುತ್ತಾರೆ. ಇಲ್ಲಿ ಕಿತ್ತೂರಿನ ಆಶಾಜ್ಯೋತಿಯಾಗಿ ವೀರಮ್ಮಳೊಬ್ಬಳೇ ಉಳಿದುಕೊಳ್ಳುತ್ತಾಳೆ. ಇಂತಹ ವಿಷಮ ಸ್ಥಿತಿಯಲ್ಲಿಯೂ ಇನ್ನೂ ಹದಿಹರೆಯದ ವೀರಮ್ಮ ವಿಚಲಿತಳಾಗಲಿಲ್ಲ. ಬದಲಾಗಿ ಸ್ವತಂತ್ರ ಕಿತ್ತೂರಿಗಾಗಿ ಹೋರಾಡಲು ಉತ್ಸುಕಳಾಗಿದ್ದಳು ಎಂಬುದನ್ನು ಹಾವನೂರರು ಕಂಡುಕೊಂಡಿದ್ದಾರೆ. ಉಲ್ಲೇಖವೊಂದರ ಪ್ರಕಾರ ೪೫೪ ರೂಪಾಯಿಗಳನ್ನು ದತ್ತಕ ಮಗನಿಗೆ ಗುಟ್ಟಾಗಿ ಕಳುಹಿಸಿಕೊಡುತ್ತಾಳೆ. ಅಲ್ಲದೆ ಆಗಿನ ಪ್ರಿನ್ಸಿಪಲ್ ಕಲೆಕ್ಟರ್ ನಿಸ್ಬೆಟ್‌ನ ಒಕ್ಕಣಿಕೆಯ ಪ್ರಕಾರ ವೀರಮ್ಮ ಕಿತ್ತೂರಿನ ವಿಮೋಚನಾ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಳು. ಇದೇ ಕಾರಣದಿಂದ ವೀರಮ್ಮನನ್ನು ಬೈಲಹೊಂಗಲದಿಂದ ಸ್ಥಳಾಂತರಿಸಲು ತೀರ್ಮಾನಿಸುತ್ತಾರೆ. ಆಗ ಅದನ್ನು ಪ್ರತಿಭಟಿಸುವುದಕ್ಕಾಗಿ ಸುತ್ತಲ ಹಳ್ಳಿಯ ಸಾವಿರಕ್ಕೂ ಮಿಕ್ಕಿ ಜನ ಜಮಾಯಿಸುತ್ತಾರೆ, ರಾಯಣ್ಣನೇನಾದರೂ ತನ್ನ ಪಡೆಯೊಡನೆ ಬಂದರೆ ಅವನಿಗೆ ಪೂರ್ಣ ರೀತಿಯ ಸಹಾಯವನ್ನು ನೀಡುವುದಕ್ಕೆ. ಇದನ್ನು ಎದುರಿಸಲು ಬ್ರಿಟಿಷರು ಬಲವಾದ ಮಿಲಿಟರಿ ವ್ಯವಸ್ಥೆಯನ್ನು ಮಾಡಿದ್ದರು. ಇದೆಲ್ಲ ಕಿತ್ತೂರಿನ ಕಿರಿಯ ರಾಣಿ ವೀರಮ್ಮನ ಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತವೆ. ಆದರೆ ಮುಂದೆ ವೀರಮ್ಮ ಯಾವುದೋ ಕಾಯಿಲೆಗೆ ತುತ್ತಾಗಿ ಮರಣವನ್ನು ಅಪ್ಪುತ್ತಾಳೆ. ಇವಳು ಆತ್ಮಹತ್ಯೆ ಮಾಡಿಕೊಂಡಳೋ? ಅಥವಾ ಯಾರೋ ನೀಡಿದ ವಿಷದ ಗುಳಿಗೆಯಿಂದ ಸತ್ತಳೋ ಎಂಬ ಊಹಾಪೋಹಗಳಿತ್ತು. ಇದನ್ನು ಆ ಕಾಲದ ಬ್ರಿಟಿಷ್ ದಾಖಲೆಯೊಂದರ ಸಹಾಯದಿಂದ ಮತ್ತು ಓರ್ವ ತಜ್ಞ ಡಾಕ್ಟರರ ಮಾಹಿತಿಯಿಂದ

ಹೆಂಗಸರಿಗೆ ಎಳೆಯ ವಯಸ್ಸಿನಲ್ಲಿ ಪ್ರಾಣಾಂತಿಕವಾಗಿ ಬರಬಹುದಾದ Puberty menorrhaqia ಎಂಬ ರೋಗದಿಂದ ಆಕೆ ತೀರಿಕೊಂಡದ್ದನ್ನು ಸಾಬೀತು ಪಡಿಸಿದರು.

ಇತ್ತೀಚೆಗೆ ಡಾ. ಎಚ್. ಚಂದ್ರಶೇಖರ ಅವರು ವೀರಮ್ಮನನ್ನು ಬಂಧಿಸಿ ಇಟ್ಟಿದ್ದ ಬಂಧಿಖಾನೆ, ಆಕೆ ಪೂಜೆ ಮಾಡಿರಬಹುದಾದ ಕಲ್ಮೇಶ್ವರ ದೇವಾಲಯದ ಅವಶೇಷಗಳು, ಇಂದಿನ ಧಾರವಾಡದ ಕಲೆಕ್ಟರ್‌ನ ನಿವಾಸದಲ್ಲಿರುವ ಆಕೆ ಕೊನೆಯುಸಿರೆಳೆದ ಕೋಣೆ, ಧಾರವಾಡದ ರವಿವಾರಪೇಟೆಯಲ್ಲಿರುವ ಕೊಂಡವಾಡ ಶೆಟ್ಟರ ಮನೆಯಲ್ಲಿರುವ ಆಕೆಯ ಸಮಾಧಿಯನ್ನು ಪತ್ತೆ ಹಚ್ಚಿರುತ್ತಾರೆ. ಇದು ಹಾವನೂರರ ಸಂಶೋಧಿತ ಸತ್ಯಕ್ಕೆ ಪೂರ್ಣತೆಯನ್ನು ನೀಡುತ್ತದೆ. ಹೀಗೆ ಡಾ। ಹಾವನೂರರು ಇತಿಹಾಸದ ಗರ್ಭದಲ್ಲಿ ಮೌನವಾಗಿ ಉಳಿದಿರುವ ಕಿತ್ತೂರಿನ ಕಿರಿಯ ರಾಣಿ ರುದ್ರಮ್ಮನ ಪಾತ್ರವನ್ನು ಯಥಾವತ್ತಾಗಿ ಕಂಡುಕೊಂಡು ಜನಮಾನಸದ ಮುಂದಿಡುವಲ್ಲಿ ಸಾಫಲ್ಯತೆಯನ್ನು ಪಡೆದಿದ್ದಾರೆ.

**ಸುರಪುರ ದುರಂತದ ನಿಜ ಸಂಗತಿ**

ಇತಿಹಾಸ ಎಂದರೆ ಹೀಗೆ ಇತ್ತು, ಹೀಗೆ ನಡೆದಿತ್ತು ಅಂದರೆ ಗತಕಾಲದ ವಿಷಯ ವಿಚಾರಗಳ ಕುರಿತಾದ ಅಧ್ಯಯನ. ಇದರಲ್ಲಿ ಕೆಲವೊಮ್ಮೆ ಉದ್ದೇಶಪೂರ್ವಕವಾಗಿಯೋ, ಅನುದ್ದೇಶಪೂರ್ವಕವಾಗಿಯೋ ಕಲ್ಪಿತ ಮತ್ತು ದೋಷಪೂರಿತ ವಿಚಾರಗಳು ನುಸುಳಬಹುದು. ಆತ್ಮಚರಿತ್ರೆಯಲ್ಲಿ ಗ್ರಂಥಕರ್ತ ತನ್ನ ಜೀವನದ ಒಂದು ಮುಖವನ್ನು ಎಷ್ಟೋ ಸಲ ಅಡಗಿಸಿಡಬಹುದು. ಇಂತಹ ಒಂದು ಸಂದರ್ಭ ೧೮೫೭–೧೮೫೮ ರ ಸುರಪುರದ ಘಟನೆಯಲ್ಲಿ ನಡೆದಿತ್ತು. ಅದನ್ನು ಕಂಡುಕೊಳ್ಳುವಲ್ಲಿ ಹಾವನೂರರು ಯಶಸ್ವಿಯಾದರು.

೧೮೭೭ರಲ್ಲಿ ಫಿಲಿಪ್ ಮೆಂಡೋಸ್ ಟೇಲರ್ ಪ್ರಕಟಿಸಿದ Story of my life ಎಂಬ ಆತ್ಮಕಥನದಲ್ಲಿ ೧೮೫೭–೧೮೫೮ ರವರೆಗೆ ಬ್ರಿಟಿಷರ ವಿರುದ್ಧ ನಡೆದ ಬಂಡಾಯದ ಸವಿವರವಾದ ವರ್ಣನೆಯನ್ನು ನೀಡಿದ್ದ. ಆದರೆ ಸುರಪುರ ದಂಗೆಯ ಕೆಲವು ಸತ್ಯಗಳನ್ನು ಮರೆಮಾಚಿದ್ದನು. ಇಲ್ಲಿ ಹಾವನೂರರು ಕೂಲಂಕಷವಾದ ಅಧ್ಯಯನ ನಡೆಸಿ ನಿಜ ಸಂಗತಿಯನ್ನು ಹೊರಗೆಡಹಿದ್ದಾರೆ.

ನಿಜಾಮನು ಸುರಪುರದ ಸಂಸ್ಥಾನಾಧಿಪತಿಯಾಗಿದ್ದ ಈಸ್ಟ್ ಇಂಡಿಯಾ ಕಂಪೆನಿಗೆ ಸಲ್ಲತಕ್ಕ ತೆರಿಗೆ ಬಾಕಿ ಇದ್ದ ಕಾರಣ ಮೆಂಡೋಸ್ ಟೇಲರನು ಆಡಳಿತದ ಮೇಲಾಧಿಕಾರಿ ಯಾಗಿ ಸುರಪುರಕ್ಕೆ ಬರುತ್ತಾನೆ ಮತ್ತು ಸುರಪುರದ ಅಭಿವೃದ್ಧಿಯ ಹರಿಕಾರನಾಗಿ ಜನರ ಪ್ರೀತಿಗೆ ಪಾತ್ರನಾಗುತ್ತಾನೆ. ಟೇಲರ್ ಸುರಪುರಕ್ಕೆ ಬಂದಾಗ ಅಲ್ಲಿಯ ರಾಜ ಕೃಷ್ಣಪ್ಪ ನಾಯಕ ನಿಧನ ಹೊಂದಿದ್ದು ಪುತ್ರ ವೆಂಕಟಪ್ಪ ನಾಯಕ ಇನ್ನೂ ಎಂಟರ ಹುಡುಗ. ಇದರಿಂದಾಗಿ ಕೃಷ್ಣ ನಾಯಕನ ರಾಣಿ ಈಶ್ವರಮ್ಮ ಮತ್ತು ಅವನ ತಮ್ಮ ಪಿಡ್ಡ ನಾಯಕರೊಳಗೆ ಉತ್ತಾರಾಧಿಕಾರಕ್ಕಾಗಿ ಹೋರಾಟ ನಡೆಯುತ್ತಿತ್ತು. ಟೇಲರನು ವೆಂಕಟಪ್ಪ ನಾಯಕ ಪ್ರಾಪ್ತ ವಯಸ್ಕನಾಗುವ ವರೆಗೆ ಪಿಡ್ಡ ನಾಯಕನೇ ರಾಜನಾಗಲು ಪೂರ್ಣ ಬೆಂಬಲ ನೀಡಿದನು. ಮಾತ್ರವಲ್ಲ ಈಶ್ವರಮ್ಮನ ಮೇಲೆ ಕುಕೃತ್ಯದ ಆರೋಪ ಹೊರಿಸಿ ಗಡೀಪಾರು ಮಾಡುತ್ತಾನೆ.

ಆದರೆ ಎರಡು ವರ್ಷದ ಬಳಿಕ ಆಕೆ ಮೇಲಾಧಿಕಾರಿಗೆ ಮನವಿ ಸಲ್ಲಿಸಿ ಮುಕ್ತಳಾಗುತ್ತಾಳೆ. ಇದು ಟೇಲರನಿಗೆ ಓನ್ನಡೆಯಾಗಿದ್ದು ಅದನ್ನು ಆತನ ಪುಸ್ತಕದಲ್ಲಿ ಉಲ್ಲೇಖಿಸಿಲ್ಲ.

ಈಶ್ವರಮ್ಮ ವೆಂಕಟಪ್ಪ ನಾಯಕನನ್ನು ಕಟುವಾಗಿ ದ್ವೇಷಿಸುತ್ತಿದ್ದಳೆಂದೂ ಅವಳಿಗೆ ಇಬ್ಬರು ಪ್ರಿಯಕರರಿದ್ದು ಆಸ್ತಿಯನ್ನು ಪೋಲು ಮಾಡುತ್ತಿದ್ದಳೆಂದೂ, ಬರೆದಿದ್ದಾನೆ. ಆದರೂ ಇದು ಸತ್ಯಕ್ಕೆ ದೂರವಾದ ಮಾತು ಎಂದು ಹಾವನೂರರ ಅಭಿಮತ.

ವೆಂಕಟಪ್ಪ ನಾಯಕ ಮತ್ತು ಟೇಲರ್‌ನ ನಡುವೆ ಅತಿಶಯವಾದ ಪ್ರೀತಿ ಮಮಕಾರಗಳಿತ್ತು ಟೇಲರ್ ವೆಂಕಟಪ್ಪನಿಗೆ ಇಂಗ್ಲೀಷ್ ಭಾಷೆಯನ್ನು ಕಲಿಸಿದ್ದನು. ಮುಂದೆ ವೆಂಕಟಪ್ಪ ಪ್ರಾಪ್ತ ವಯಸ್ಕನಾದಾಗ ಸಿಂಹಾಸನವನ್ನೇರಿದನು. ಆದರೆ ಕೆಲವೇ ವರ್ಷಗಳಲ್ಲಿ ನಾನಾ ಬಗೆಯ ವ್ಯಸನಗಳಲ್ಲಿ ಮುಳುಗಿ ಆರ್ಥಿಕ ಸ್ಥಿತಿ ಕುಸಿಯುತ್ತದೆ. ಮುಂದೆ ಆರ್ಥಿಕ ಲಾಭಕ್ಕಾಗಿ ಬ್ರಿಟಿಷರ ವಿರುದ್ಧ ಮರಾಠರ ಪಕ್ಷ ವಹಿಸಿದ್ದ. ಗುಟ್ಟಾಗಿ ಅರಬ್ಬರು ಮತ್ತು ರೋಹಿಲ್ಲರನ್ನು ಸೈನ್ಯದಲ್ಲಿ ಭರ್ತಿ ಮಾಡಲಾರಂಭಿಸಿದ. ಇದರಿಂದಾಗಿ ಬ್ರಿಟಿಷ್ ಸರಕಾರವು ಕ್ಯಾಂಪ್‌ಬೆಲ್ ಎಂಬಾತನನ್ನು ವಿಚಾರಣೆಗೆ ಕಳುಹಿಸಿ ಎಚ್ಚರಿಕೆ ನೀಡುತ್ತದೆ. ಆದರೆ ವೆಂಕಟಪ್ಪನ ಮೇಲಿನ ಮಮತೆಯಿಂದ ಈ ವಿಷಯವನ್ನು ಟೇಲರ್ ತನ್ನ ಆತ್ಮಚರಿತ್ರೆಯಲ್ಲಿ ಉಲ್ಲೇಖಿಸುವುದಿಲ್ಲ. ಮುಂದೊಂದು ದಿನ ವೆಂಕಟಪ್ಪನಾಯಕನನ್ನು ಬಂಧಿಸಿ ಸೆರೆಮನೆಯಲ್ಲಿಟ್ಟಾಗ ಟೇಲರ್ ಅವನನ್ನು ಭೇಟಿಯಾಗುತ್ತಾನೆ. ಆತ ತನ್ನ ತಪ್ಪನ್ನು ಪಶ್ಚಾತ್ತಾಪದ ಧ್ವನಿಯಲ್ಲಿ ನಿವೇದಿಸಿಕೊಂಡಾಗ ಮನಕರಗಿದ ಟೇಲರ್ ವೆಂಕಟಪ್ಪನ ಪರವಾಗಿ ವಾದಿಸಿ ಅವನಿಗಾಗಬಹುದಾಗಿದ್ದ ನೇಣುಗಂಬ ಅಥವಾ ಜೀವಮಾನವಿಡೀ ಗಡೀಪಾರು ಶಿಕ್ಷೆಯನ್ನು ಕಡಿಮೆ ಮಾಡಿ ನಾಲ್ಕು ವರ್ಷಗಳ ಗೃಹಬಂಧನ (ಅದೂ ಆತನ ರಾಣಿ ಮತ್ತು ಸೇವಕರನ್ನು ಇರಿಸಿಕೊಂಡು) ಆಗುವಂತೆ ಮಾಡುತ್ತಾನೆ. ಆದರೆ ವಿಚಿತ್ರವೆಂಬಂತೆ ಹೈದರಾಬಾದಿನ ಶಿಬಿರ ತಲುಪುವ ಮೊದಲೇ ವೆಂಕಟಪ್ಪ ನಾಯಕ ತನಗೆ ತಾನೇ ಗುಂಡು ಹೊಡೆದು ಸತ್ತನೆಂದು ಹೇಳಲಾಗಿದೆ. ಆದರೆ ಟೇಲರ್‌ನ ಅಭಿಪ್ರಾಯ ಅಧಿಕಾರಿಯೊಬ್ಬನ ಕೈಕೋವಿಯನ್ನು ಕುತೂಹಲದಿಂದ ಪರೀಕ್ಷಿಸುವಾಗ ಆದ ಅಜಾಗರೂಕತೆಯಿಂದ ಈ ದುರಂತ ನಡೆದಿದೆ. ಇದನ್ನು ಅಸಮಂಜಸ ಎಂದು ಹಾವನೂರರು ವಾದಿಸುತ್ತಾರೆ. ಯಾಕೆಂದರೆ ರಾಜನಾದ ವೆಂಕಟಪ್ಪನಾಯಕನು ಅಲ್ಲಿವರೆಗೆ ಕೋವಿಯನ್ನು ಬಳಸಲಿಲ್ಲ ಎಂಬುದೇ ನಂಬಲಾಗದ ವಿಷಯ. ಒಂದೊಮ್ಮೆ ಕುತೂಹಲದಿಂದ ಎತ್ತಿಕೊಂಡಾಗ ಆಕಸ್ಮಿಕವಾಗಿ ಗುಂಡಿಯೊತ್ತಿದ್ದರೂ ಗುಂಡು ಅವನ ದೇಹದತ್ತ ನೆಗೆಯದೆ ಎದುರುಗಡೆ ನೆಗೆಯಬೇಕಾಗಿತ್ತು ಎಂಬುದು ಹಾವನೂರರ ವಾದ. ಆದ್ದರಿಂದ ಯಾರೋ ಬ್ರಿಟಿಷರೇ ಗುಂಡಿಕ್ಕಿದ್ದು ಅಪರಾಧದ ವಿಷಯವನ್ನು ಮುಚ್ಚಿಡಲಾಗಿದೆ.

ಮುಂದೆ ಹನ್ನೆರಡು ವರ್ಷಗಳ ನಂತರ ಇನ್ನೊಬ್ಬ ವ್ಯಕ್ತಿ ತಾನೇ ವೆಂಕಟಪ್ಪ ನಾಯಕನೆಂದೂ, ತಾನು ಸತ್ತಿಲ್ಲವೆಂದೂ ವಾದ ಹೂಡುತ್ತಾನೆ. ಎಲ್ಲಾ ವಿಷಯಗಳು ಅವನ ಪರವಾಗಿಯೇ ಇತ್ತು ಕೂಡಾ. ಆದರೆ ಅವನಿಗಿದ್ದ ಇಂಗ್ಲೀಷ್ ಅಜ್ಞಾನದಿಂದ ಸೋಲಬೇಕಾಗುತ್ತದೆ. ವೆಂಕಟಪ್ಪ ನಾಯಕ ಟೇಲರ್‌ನಿಂದ ಇಂಗ್ಲೀಷ್ ಕಲಿತವನಾಗಿದ್ದ,

ಟೇಲರ್ ಮಗದೊಮ್ಮೆ ಸುರಪುರದ ಜವಾಬ್ದಾರಿಯುತ ಅಧಿಕಾರಿಯಾಗಿದ್ದನು. ಆ ಬಳಿಕ ಅದನ್ನು ೧೮೫೭ರ ವಿಪ್ಲವದ ಕಾಲದಲ್ಲಿ ಸಹಕರಿಸಿದ ನಿಜಾಮನಿಗೆ ಗುಟ್ಟಾಗಿ

ನೀಡಲಾಯಿತು. ಇಲ್ಲಿಯ ರಹಸ್ಯದೊಳಗಿನ ರಹಸ್ಯವನ್ನು ಹಾವನೂರು ಹೀಗೆ ಭೇದಿಸುತ್ತಾರೆ. ೧೮೫೮ರ ವಿಕ್ಟೋರಿಯ ರಾಣಿಯ ಘೋಷಣೆಯ ಪ್ರಕಾರ, ಸುರಪುರ ವೆಂಕಪ್ಪನ ಕುಟುಂಬಕ್ಕೆ ಬರತಕ್ಕದ್ದು. ಆದರೆ ಅದಕ್ಕೆ ವಿರುದ್ಧವಾಗಿ ವೆಂಕಟಪ್ಪನ ರಾಣಿ ರಂಗಮ್ಮ ಮತ್ತು ಕುಟುಂಬದವರಿಗೆ ಮಾಸಾಶನವನ್ನು ನೀಡಲಾಯಿತು. ರಾಣಿ ಬ್ರಿಟಿಷ್ ಪಾರ್ಲಿಮೆಂಟ್‌ನ ಮೊರೆ ಹೋಗುತ್ತಾಳೆ. ಭಾರತದ ಮುಖ್ಯ ಕಾರ್ಯದರ್ಶಿಗಳಿಗೆ ತಿಳಿಸುತ್ತಾಳೆ. ಆದರೂ ಯಾವುದೇ ಪ್ರಯೋಜನವಾಗುವುದಿಲ್ಲ, ಹೀಗೆ ಸುರಪುರ ಸಂಸ್ಥಾನದ ಕಥೆ ದುರ್ವಿಧಿಯ ಪರಮಾವಧಿ ಎಂದು ಹಾವನೂರರು ಕಂಡುಕೊಳ್ಳುತ್ತಾರೆ.

**ಉತ್ತರ ಕನ್ನಡ ಜಿಲ್ಲೆ ನಿರ್ಮಾಣವಾದ ಬಗೆ**

ಟಿಪ್ಪು ಸುಲ್ತಾನನ ಕಾಲದಿಂದ ಕೆನರಾ ಎಂಬ ಈ ಹೆಸರಿನಿಂದ ಕರೆಯಲ್ಪಡುತ್ತಿದ್ದ ಪ್ರಾಂತ್ಯ ಮುಂದೆ ೧೮೬೨ ರ ಹೊತ್ತಿಗೆ, ಬ್ರಿಟಿಷರ ಕಾಲದಲ್ಲಿ ವಿಭಾಗವಾಗಿ ಉತ್ತರಕನ್ನಡ ಜಿಲ್ಲೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳೆಂದು ಕರೆಯಲ್ಪಟ್ಟ ಕಾರಣವನ್ನು ಹುಡುಕಿ ಕಂಡುಕೊಂಡ ಸತ್ಯ ಹೀಗಿದೆ :–

ಅಂದಿನ ಮುಂಬೈ ಪ್ರಾಂತ್ಯದ ಕನ್ನಡ ಜಿಲ್ಲೆಗಳು ಹತ್ತಿ ಬೆಳೆಯುವುದಕ್ಕೆ ಫಲವತ್ತಾದ ಪ್ರದೇಶವಾಗಿದ್ದು, ಇಂಗ್ಲೆಂಡಿನಿಂದ ಕಚ್ಚಾ ಹತ್ತಿಗೆ ಅಪಾರವಾದ ಬೇಡಿಕೆಯೂ ಇತ್ತು. ಅಮೇರಿಕಾದಲ್ಲಿ ಉಂಟಾದ ಯಾದವೀ ಕಲಹದಿಂದ ಹತ್ತಿಯನ್ನು ಅಲ್ಲಿಂದ ಆಮದು ಮಾಡುವುದು ದುಸ್ತರವಾದಾಗ ಈ ಬೇಡಿಕೆ ಇನ್ನಷ್ಟು ಹೆಚ್ಚಿತ್ತು. ಅಮೇರಿಕಾದಿಂದ ಉದ್ದ ಎಳೆಯ ಹತ್ತಿ ಬೀಜವನ್ನು, ಕೃಷಿ ತಜ್ಞರನ್ನು ಭಾರತಕ್ಕೆ ತರಿಸಲಾಯಿತು. ಆದರೆ ಹತ್ತಿಯನ್ನು ಇಂಗ್ಲೆಡ್‌ಗೆ ರವಾನಿಸಲು ಇರುವ ಏಕೈಕ ಬಂದರು ಮುಂಬಯಿಯಾಗಿದ್ದು, ರೈಲ್ವೇ ಸೌಕರ್ಯವಿಲ್ಲದ ಅಂದಿನ ದಿನಗಳಲ್ಲಿ ಎತ್ತಿನ ಗಾಡಿಯ ಮೂಲಕ ಮುಂಬಯಿಗೆ ಸಾಗಿಸುವುದು ಸಾಹಸದ ಕೆಲಸವೇ ಆಗಿದ್ದಿತ್ತು. ಅಲ್ಲದೆ ಬ್ರಿಟೀಷ್ ವ್ಯಾಪಾರಿಗಳು ಮುಂಬಯಿ ದಲ್ಲಾಳಿಗಳಿಗೆ ಹೆಚ್ಚು ಕಮಿಶನ್ ಕೊಡಲು ಸಿದ್ಧರಿರಲ್ಲಿಲ್ಲ. ಆದ್ದರಿಂದ ಪಶ್ಚಿಮ ಕರಾವಳಿಯಲ್ಲಿ ದೊಡ್ಡ ದೊಡ್ಡ ಸರಕಿನ ಹಡಗುಗಳಿಗೆ ಲಂಗರು ಹಾಕಲು ಅನುಕೂಲತೆಗಳಿರುವ ಸೂಕ್ತ ಬಂದರಿನ ಅನ್ವೇಷಣೆಗೆ ತೊಡಗಿದಾಗ ಅವರ ಗಮನಕ್ಕೆ ಬಂದದ್ದು ಕೆನರಾ ಪ್ರಾಂತ್ಯದ ಸದಾಶಿವಗಡದ ಕಾರವಾರ ಬಂದರು. ಆದರೆ ಇದು ಕಾರ್ಯಪ್ರವೃತ್ತವಾಗಬೇಕಾದರೆ ಎರಡು ಕೆಲಸಗಳು ತುರ್ತಾಗಿ ಆಗಬೇಕಿತ್ತು ಮೊದಲನೆಯದಾಗಿ ಸದಾಶಿವಗಡ ಬಂದರನ್ನು ಅಭಿವೃದ್ಧಿಪಡಿಸುವುದು, ಎರಡನೆಯದಾಗಿ ಧಾರವಾಡ ಕಡೆಯಿಂದ ಹತ್ತಿಯ ಸಾಗಾಟಕ್ಕೆ ಅನುಕೂಲವಾಗುವಂತೆ ಹುಬ್ಬಳ್ಳಿ ಕದ್ರಾ ಮಧ್ಯೆ ವಿಶಾಲ ರಸ್ತೆ ನಿರ್ಮಿಸುವುದು. ಆದರೆ ಯೋಜನೆಯ ಮೇಲೆ ಹಣ ಯಾರು ವ್ಯಯಿಸಬೇಕೆಂಬ ಪ್ರಶ್ನೆ ಬಿಡಿಸಲಾಗದ ಕಗ್ಗಂಟಾಯಿತು. ಮದ್ರಾಸ್ ಸರಕಾರದ ಬಳಿ ಆಗಲೇ ಕೊಚಿನ್ ಮತ್ತು ಮಂಗಳೂರು ಬಂದರುಗಳಿದ್ದು ಅದು ಈಗ ಮುಂಬಯಿಗಾಗಿ ಈ ಬಂದರು ನಿರ್ಮಿಸಲು ತನ್ನ ಹಣವನ್ನು ವ್ಯಯಿಸಲು ಹಿಂದೇಟು ಹಾಕುತ್ತಿತ್ತು, ಹೀಗಾಗಿ ಈ ಯೋಜನೆಯು ನೆನೆಗುದಿಗೆ ಬಿತ್ತು. ಆದರೆ ವಣಿಕ ವರ್ಗಗಳನ್ನು ತೃಪ್ತಿಪಡಿಸುವುದಕ್ಕಾಗಿ ಬಂದರಿನ ಅಭಿವೃದ್ಧಿ ಆಗಲೇ ಬೇಕಿತ್ತು. ಇಲ್ಲವಾದರೆ

ಕಾಟನ್ ಲಾಬಿ ಸರಕಾರದ ಅಭಿಪ್ರಾಯವನ್ನೇ ಅಲ್ಲಾಡಿಸಿ ಬಿಡಬಹುದಿತ್ತು. ಒಂದೇ ಪ್ರದೇಶದ ಎರಡು ಯೋಜನೆಗಳು ಎರಡು ಬೇರೆ ಬೇರೆ ಸರಕಾರಗಳಿಂದ ಆಗಬೇಕಾಗಿರುವುದೇ ವಿಳಂಬಕ್ಕೆ ಕಾರಣವೆಂಬುದು ಸ್ಪಷ್ಟವಾಗಿತ್ತು. ಸದಾಶಿವಗಡ ಹಾಗೂ ಅದಕ್ಕೆ ಹೊಂದಿಕೊಂಡಿದ್ದ ಪ್ರದೇಶಗಳನ್ನೆಲ್ಲಾ ಮುಂಬಯಿ ಪ್ರಾಂತ್ಯಕ್ಕೆ ವರ್ಗಾಯಿಸಿದರೆ ಬಂದರಿನ ಅಭಿವೃದ್ಧಿ ಹಾಗೂ ರಸ್ತೆ ನಿರ್ಮಾಣ ಎರಡೂ ಒಂದೇ ಕಕ್ಷೆಯಲ್ಲಿ ಬರುವುದರಿಂದ ಕಾರ್ಯ ಸುಗಮವಾಗುತ್ತದೆ. ಎಂದು ತಿಳಿದು ಕೆನರಾವನ್ನು ವಿಭಜಿಸಿ ಗಜೆಟ್ ಪ್ರಕಟನೆಯನ್ನು ೧೮೬೨ರ ಎಪ್ರಿಲ್ ೧೫ ರಂದು ಹೊರಹಾಕುತ್ತದೆ. ಇದರಿಂದ ಕಾರವಾರದ ಆಸುಪಾಸಿನ ಜಾಗಕ್ಕೆ ಭಾರೀ ಬೇಡಿಕೆ ಯಾಯಿತು. ಆದರೆ ಇದೇ ಸಮಯಕ್ಕೆ ಅಮೇರಿಕಾದ ಯಾದವೀ ಕಲಹ ಅಂತ್ಯಗೊಂಡು ಅಲ್ಲಿಯ ಹತ್ತಿ ಪೂರೈಕೆ ಪುನರಾರಂಭಗೊಂಡಿತ್ತು. ಇದರಿಂದ ವ್ಯಾಪಾರಿಗಳಿಗೆ ಕಾರವಾರದ ಮೇಲಿದ್ದ ಆಸಕ್ತಿ ಕಡಿಮೆಯಾಯಿತು. ಅಲ್ಲದೇ ಮುಂಬಯಿಯ ಹತ್ತಿ ವ್ಯಾಪಾರಿಗಳು ಸಹ ಕಾರವಾರದ ಯೋಜನೆಯ ವಿರುದ್ಧ ತಕರಾರು ಆರಂಭಿಸಿದರು. ಅಂತೂ ಈ ಯೋಜನೆ ಅರ್ಧದಲ್ಲೆ ನಿಂತು ಹೋಯಿತು ಆದರೆ ಕೆನರಾ ಪ್ರಾಂತ್ಯ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡವೆಂಬ ಎರಡು ವಿಭಾಗ ರಚನೆಯಾಗುವುದಕ್ಕೆ ಕಾರಣವಾಯಿತು.

### ಕನಕ ಗೋಪುರದ ಕಾಲನಿರ್ಣಯ

ಉಡುಪಿಯ ರಥಬೀದಿಯಲ್ಲಿರುವ ಸುಪ್ರಸಿದ್ಧ ಕನಕಗೋಪುರವನ್ನು – ಕನಕದಾಸರ ಮಹಿಮೆಯನ್ನು ಸಾರುವುದಕ್ಕೆ – ವಿಜಯನಗರದ ರಾಜನು ೧೬ನೇ ಶತಮಾನದಲ್ಲಿ ಕಟ್ಟಿಸಿದರು ಎಂಬುದಾಗಿಯೂ, ಅಲ್ಲ; ಅದು ೧೯೧೮ರ ಸುಮಾರಿಗೆ ಆಗಿನ ಕೃಷ್ಣ ಮಠದ ಪರ್ಯಾಯ ಸ್ವಾಮಿಗಳು ಕಟ್ಟಿಸಿದ್ದು ಎಂಬ ಪ್ರತಿವಾದಗಳೂ ಸೃಷ್ಟಿಯಾಗಿ ಗೊಂದಲವನ್ನುಂಟು ಮಾಡಿತ್ತು. ಹಾವನೂರರು ದಿನಾಂಕ ೧೯ ಜೂನ್ ೧೮೯೪ರಂದು ಅಂದರೆ ಈಗ ಸುಮಾರು ೧೧೭ ವರ್ಷಗಳ ಹಿಂದೆ ಉಡುಪಿಯ ಡಿಸ್ಟ್ರಿಕ್ಟ್ ಮುನ್ಸಿಫ್ ಎಂ ಮುಂಡಪ್ಪ ಬಂಗೇರಾ ಅವರು ಉಡುಪಿ ರಥಬೀದಿಗೆ ಸಂಬಂಧಿಸಿ ನೀಡಿದ ಒಂದು ತೀರ್ಪಿನ ಆಧಾರದಿಂದ ಆ ಗೋಪುರ ೧೮೯೪ಕ್ಕಿಂತಲೂ ಮುಂಚೆ ಇರಲಿಲ್ಲ ಮತ್ತು ೧೯೧೧ರಲ್ಲಿ ನಿರ್ಮಿತವಾದದ್ದು ಎಂದು ಸಾಧಿಸಿ ತೋರಿಸಿದ್ದಾರೆ. ಯಾಕೆಂದರೆ ಆ ತೀರ್ಪಿನಲ್ಲಿ ಅನಂತೇಶ್ವರ ದೇವಾಲಯದ ನಾಲ್ಕೂ ದಿಕ್ಕುಗಳಲ್ಲಿರುವ ಮನೆ, ಮಠ, ಗೋಡೆ ಎಲ್ಲದರ ವಿವರವಿದೆ. ವಾಲಗ ಮಂಟಪ, ಅಕ್ಕಿ ಬಸಿಯುವ ಮುಂತಾದ ಕೆಲಸಗಳಿಗಿದ್ದ ಅರಿಕೋಟ್ಲು ಮುಂತಾದವುಗಳೂ ಸಹ ಉಲ್ಲೇಖವಾಗಿರುವಾಗ ಆಗ ಕನಕ ಮಂಟಪ ಇದ್ದಿದ್ದೇ ಹೌದಾಗಿದ್ದಲ್ಲಿ ಅದರ ಉಲ್ಲೇಖ ಖಂಡಿತವಾಗಿಯೂ ಆಗುತ್ತಿತ್ತು ಎಂದು ಹಾವನೂರರ ಅಭಿಮತ.

### ಪ್ರೊ. ಸುಧಾಕರರ ವಾದಕ್ಕೊಂದು ಪ್ರತಿವಾದ

ಪ್ರೊ. ಸುಧಾಕರರು, ಕನಕದಾಸರ ಎಷ್ಟೋ ಕೀರ್ತನೆಗಳನ್ನು ಪುರಂದರವಿಠಲ ಎಂಬುದಾಗಿ ಅಂಕಿತ ಪಲ್ಲಟ ಮಾಡಿ, ಅವು ಪುರಂದರದಾಸರ ಕೀರ್ತನೆಗಳೆಂಬುದಾಗಿ ಬೇಕೆಂದೇ ಮಾಡಿದ್ದಾರೆಂದೂ, ಕನಕದಾಸರು ಉಡುಪಿಗೆ ಹೋಗುವುದಕ್ಕೆ ಮುಂದಾಗಿ

ಕೇಡು, ಸೇಡುಗಳಿಂದ ಕೂಡಿದವರಾಗಿ, ಪುರಂದರದಾಸರು ಅಲ್ಲಿಗೆ ಹೋಗಿ ಕನಕದಾಸರಿಗೆ ಕೃಷ್ಣದರ್ಶನ ಆಗದಂತೆ ನೋಡಿಕೊಂಡರು ಎಂಬ ಆಧಾರರಹಿತ ಆರೋಪವನ್ನು ಮಾಡಿ ಸಾರ್ವಜನಿಕ ಕ್ಷೋಭೆಗೆ ಕಾರಣವಾದಾಗ ಅವುಗಳ ಸತ್ಯಾಸತ್ಯತೆಯನ್ನು ಹಾವನೂರರು ಈ ರೀತಿಯಾಗಿ ಕಂಡುಕೊಳ್ಳುತ್ತಾರೆ.

ಪ್ರೊ. ಸುಧಾಕರರ ಪ್ರಕಾರ ವ್ಯಾಸರಾಯರು ದಾಸರೆಂದರೆ ಕನಕದಾಸರಯ್ಯ ಎಂದು ಬರೆದಿರುವುದು. ಆದರೆ ಅದನ್ನು ದಾಸರೆಂದರೆ ಪುರಂದರದಾಸರಯ್ಯ ಎಂದು ಪರಿವರ್ತಿಸಲಾಗಿದೆ. ಆದರೆ 'ಕನಕ' ಎಂದೇ ವ್ಯಾಸರಾಯರು ರಚಿಸಿದ್ದಾದರೆ ಅಲ್ಲಿಯ ಮಾತ್ರೆಗಳ ಲೆಕ್ಕದಲ್ಲಿ ಮೂರು ಮಾತ್ರೆಗಳು ಬರುತ್ತದೆ. ಇದರಿಂದ ತಾಳ, ಲಯ ತಪ್ಪುತ್ತದೆ. ವ್ಯಾಸರಾಯರು ಕೀರ್ತನೆ ರಚನೆಯಲ್ಲಿ ಇಂತಹ ತಪ್ಪನ್ನು ಮಾಡುವುದಕ್ಕೆ ಸಾಧ್ಯವಿಲ್ಲ. ಇನ್ನು ಅಂಕಿತ ಬದಲಾವಣೆ ಮಾಡುವುದಿದ್ದರೆ ಕನಕದಾಸರ ಅನೇಕ ಉತ್ತಮೋತ್ತಮ ಕೀರ್ತನೆಗಳನ್ನು ಪುರಂದರದಾಸರ ಕೀರ್ತನೆಗಳಾಗಿ ಪರಿವರ್ತಿಸ ಬಹುದಿತ್ತು. ಅಂಕಿತ ಪಲ್ಲಟ ಎಲ್ಲೋ ಕೆಲವು ಅಜ್ಞಾನದಿಂದ ಆಗಿರಬಹುದೇ ಹೊರತು ಬುದ್ಧಿಪೂರ್ವಕವಾಗಿ ಕೃತಿಚೌರ್ಯದ ದೃಷ್ಟಿಯಿಂದ ನಡೆದಿಲ್ಲ ಎಂದು ಹಾವನೂರರು ಸಾಧಿಸಿದ್ದಾರೆ.

ಇನ್ನು ಕನಕದಾಸರ ಕೃಷ್ಣದರ್ಶನದ ಪ್ರಕರಣ. ಪ್ರೊ. ಸುಧಾಕರರ ಪ್ರಕಾರ ಆ ಘಟನೆ ನಡೆದದ್ದು ೧೫೧೦–೧೨ರ ಸುಮಾರಿಗೆ. ಅವರೇ ಸಂಪಾದಿಸಿದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಸಮಗ್ರ ದಾಸ ಸಾಹಿತ್ಯ ಪ್ರಕಟನೆಯ ಕನಕದಾಸ ಸಂಪುಟದಲ್ಲಿ ಕನಕದಾಸರ ಜನ್ಮ ವರುಷವನ್ನು ಆಧಾರ ಸಹಿತ ಕ್ರಿಶ ೧೪೯೫ ಎಂದು ನಿರ್ಣಯಿಸಿದ್ದಾರೆ. ಹಾಗಾದರೆ ಈ ಮೇಲಿನ ಘಟನೆ ನಡೆದಾಗ ಕನಕದಾಸರಿಗೆ ಕೇವಲ ೧೫–೧೭ ವರುಷ. ಅವರು ಸೇನಾನಿಯಾಗಿ ಯುದ್ಧ ಮಾಡಿದ್ದು, ವೈರಾಗ್ಯ ತಾಳಿ ವ್ಯಾಸರಾಯರ ಬಳಿ ಬಂದದ್ದು, ಮೋಹನ ತರಂಗಿಣಿ ಕಾವ್ಯ ರಚಿಸಿದ್ದು ಈ ಎಲ್ಲವೂ ೧೫ ವರ್ಷದೊಳಗೆ ಆಯಿತೆನ್ನಬೇಕು. ಆದ್ದರಿಂದ ಪ್ರೊ. ಸುಧಾಕರರ ಹೇಳಿಕೆ ಕೇವಲ ಅವರ ಕಪೋಲ ಕಲ್ಪಿತ, ಸತ್ಯಕ್ಕೆ ದೂರವಾದದ್ದು ಎಂದು ಹಾವನೂರರು ತೀರ್ಮಾನಕ್ಕೆ ಬಂದಿದ್ದಾರೆ.

## ಇತಿಹಾಸ ಸಂಶೋಧನೆಗೆ ಡಾ। ಹಾವನೂರರು ನೀಡಿದ ಹೊಸ ಆಯಾಮಗಳು

(ಇತಿಹಾಸ ಸಮ್ಮೇಳನದ ಅಧ್ಯಕ್ಷೀಯ ಭಾಷಣದ ಆಧಾರದಿಂದ)

ಸಾಹಿತ್ಯ ಮತ್ತು ಇತಿಹಾಸ ಇವೆರಡೂ ಸಂಶೋಧನಾ ಪ್ರಕ್ರಿಯೆಯಲ್ಲಿ ಸಮಾನ ಸ್ತರದಲ್ಲಿದ್ದು ಪರಸ್ಪರ ಪೂರಕವಾಗಿಯೂ ಕೆಲಸ ಮಾಡುತ್ತದೆ. ಇತಿಹಾಸ ಸಂಶೋಧನೆಯಲ್ಲಿ ಶಾಸನಗಳ ನಂತರ ಹಳಗನ್ನಡ ಕಾವ್ಯ ಸಾಹಿತ್ಯಕ್ಕೆ ಪ್ರಾಮುಖ್ಯತೆ ಸಲ್ಲತಕ್ಕದ್ದು, ಸಾಹಿತ್ಯ ಪ್ರಕಾರಗಳಲ್ಲಿ 'ಕಂಠೀರವ ನರಸರಾಜ ವಿಜಯ'ದಂತಹ ನೇರವಾದ ಇತಿಹಾಸ ಕಾವ್ಯಗಳಿವೆ. ಇನ್ನು ಅನೇಕ ಕೃತಿಗಳಲ್ಲಿ ಚರಿತ್ರೆಯ ಅಂಶಗಳು ಪರ್ಯಾಯವಾಗಿಯೋ, ಸೂಕ್ಷ್ಮ ರೀತಿ ಯಾಗಿಯೋ ಹುದುಗಿಕೊಂಡಿರುತ್ತದೆ. ಆದ್ದರಿಂದ ಇತಿಹಾಸ ಅಭ್ಯಾಸಿಗಳು ಒಂದು ನಿರ್ದಿಷ್ಟ ಕಾಲದಲ್ಲಿಯ ಚರಿತ್ರೆಯನ್ನು ರೂಪಿಸುವಾಗ ಆ ಕಾಲದ ಕಾವ್ಯಗಳನ್ನು ಪರಿಶೀಲಿಸಬೇಕು.

ಕಾವ್ಯಗಳಂತೆ ಇತಿಹಾಸಕಾರರ ಅವಜ್ಞೆಗೆ ಒಳಗಾಗಿರುವ ಇನ್ನೊಂದು ಆಕರವೆಂದರೆ

ಕಾಗದದ ದಾಖಲೆಗಳು. ಮಧ್ಯೋತ್ತರ ಕಾಲದ ಸ್ಥಿತಿಗತಿಯನ್ನು ತಿಳಿಯುವಲ್ಲಿ ಶಾಸನಗಳಿಗಿಂತ ಇವುಗಳೇ ಹೆಚ್ಚು ಪ್ರಯೋಜನಕಾರಿಯಾಗಿದ್ದು ಇವು ಕಳೆದ ಮುನ್ನೂರು ವರ್ಷಗಳಿಂದ ಲಕ್ಷಗಟ್ಟಲೆಯಷ್ಟು ರೂಪಿತಗೊಂಡಿದ್ದು ಪತ್ತೆ ಹಚ್ಚಿ ಸಂಗ್ರಹಿಸಬೇಕು. ಮಹಾರಾಷ್ಟ್ರದಲ್ಲಿ ಈ ನಿಟ್ಟಿನಲ್ಲಿ ಕೆಲಸ ನಡೆಯುತ್ತಿದ್ದು, ದಾಖಲೆ ಸಂಗ್ರಹಿಸಿ ವಿಷಯಾನುಸಾರ ಪ್ರಕಟಿಸುತ್ತಿದ್ದಾರೆ. 'ಪೇಶ್ವೆ–ಸಾಮಾಜಿಕ ಧಾರ್ಮಿಕ' 'ಮರಾಠಿ ರಿಯಾಸತ' ಮುಂತಾದವುಗಳನ್ನು ಇಲ್ಲಿ ಉದಾಹರಿಸಬಹುದು. ಅಲ್ಲದೆ 'The Karnataka Expeditions of Peshwa Madhavarao' ಎಂಬ ಸದರಿನಲ್ಲಿ ಬರುವ ಕಾಗದ ಪತ್ರಗಳು ನಮಗೆ ನೇರವಾಗಿ ಸಂಬಂಧಿಸಿದವುಗಳಾಗಿವೆ. ಆ ಕಾಲದ ದಾಖಲೆಗಳು ನಮ್ಮಲ್ಲಿಯೂ ದೊರೆಯ ಬಲ್ಲವು. ಆದರೆ ಅಂಥ ದಾಖಲೆಗಳ ಬಗ್ಗೆ ಗಮನಹರಿಸಿಲ್ಲ. ಹಸ್ತಪ್ರತಿ, ಕಾಗದ ಪತ್ರಗಳ ಕಡೆಗೆ ಪಾಶಸ್ತ್ಯ ನೀಡುವ ಕೆಲಸ ಆಗಬೇಕಿದೆ.

ಡಾ. ಹಾವನೂರರು ತಾವು ಕಂಡು ಕೊಂಡ ಈ ಅಂಶಗಳನ್ನು ವಿಶಧೀಕರಿಸುವುದಕ್ಕಾಗಿ ಕಾಗದ ಪತ್ರಗಳಿಂದ ಅವರಿಗೆ ದೊರಕಿರುವ ಎರಡು ಮುಖ್ಯ ಐತಿಹಾಸಿಕ ವಿಷಯವನ್ನು ಉದಾಹರಿಸಿದ್ದಾರೆ. ಒಂದು 'ದೀಪದ ಖೊಬ್ರಿ' ಎಂಬ ಶಬ್ದ. ಇನ್ನೊಂದು;ಕೈಯಿಂದ ಬರೆದ ಕೆಂಪು ಬಾರ್ಡರ್‌ನಲ್ಲಿ ಹಳದಿ ಬಣ್ಣ ಸಹಿತವಾದ ವಿವಾಹದ ಆಮಂತ್ರಣ ಪತ್ರಿಕೆ ಇದು ಎರಡೂ ಕೂಡಾ ಆ ಕಾಲದ ಆಗರ್ಭ ಶ್ರೀಮಂತರ ದೌಲತ್ತನ್ನು ಸಾಕ್ಷೀಕರಿಸುತ್ತದೆ. ಶ್ರೀಮಂತರು ಮೇಣೆಯಲ್ಲಿ ಕುಳಿತು ಸಂಚರಿಸುವಾಗ ಹಗಲು ಹೊತ್ತಿನಲ್ಲಿಯೂ ಕೂಡಾ ದೀಪ ಹಚ್ಚುತ್ತಿದ್ದರು. ಮತ್ತು ಆ ದೀಪಕ್ಕೆ ಎಣ್ಣೆಗಾಗಿ ಕೊಬ್ಬರಿಯನ್ನೇ ಉರಿಸುತ್ತಿದ್ದರು. ಅದುವೇ ದೀಪದ 'ಖೊಬ್ರಿ' ಇನ್ನೊಂದು ಶ್ರೀಮಂತರ ವೈಭೋಗದ ಏಳು ದಿನಗಳ ಕಾರ್ಯಕ್ರಮದ ವಿವರವನ್ನು ನೀಡುವ ಲಗ್ನಪತ್ರಿಕೆ, ಹೀಗೆ ಕಾಗದ ಪತ್ರವು ಆ ಕಾಲದ ಜನಜೀವನದ ಬಗೆಯನ್ನು ತಿಳಿಸಿಕೊಡುತ್ತದೆ.

ಮಧ್ಯೋತ್ತರ ಕಾಲದ ಚಾಳುಕ್ಯ, ರಾಷ್ಟ್ರಕೂಟ, ವಿಜಯನಗರ ಮುಂತಾದ ರಾಜಮನೆತನಗಳ ಬಗ್ಗೆ ವ್ಯಾಪಕ ಸಂಶೋಧನೆ ನಡೆದು ಉದ್ಗ್ರಂಥಗಳು ಪ್ರಕಟವಾಗಿದೆ. ಆದರೆ ಈ ದರ್ಜೆಗಿಂತ ಕೆಳಗಿನ ಸ್ಥಾನದಲ್ಲಿಯ ಪಾಳೆಯಗಾರರು, ಸಂಸ್ಥಾನಿಕರು ನೂರಿನ್ನೂರು ಸಂಖ್ಯೆಯಲ್ಲಿ ಆಗಿಹೋಗಿದ್ದು ಅವರಲ್ಲಿ ಕೆಲವರ ಬಗ್ಗೆ ಮಾತ್ರ ಅಧ್ಯಯನ ನಡೆದಿದೆ. ಅಲ್ಲದೆ ಇನ್ನೂ ಒಂದು ಹೆಜ್ಜೆ ಕೆಳಗಿಳಿದರೆ ಅನೇಕ ದೇಸಾಯಿ, ಇನಂದಾರ, ಗೌಡ, ಪಟೇಲರಿದ್ದಾರೆ. ಇವರು ಕೂಡಾ ಆಡಳಿತ ನಡೆಸಿದ್ದಾರೆ. ಸಣ್ಣ ದೊಡ್ಡ ಕಾಳಗದಲ್ಲಿ ಪಾಲ್ಗೊಂಡಿದ್ದಾರೆ. ಆ ಸೀಮೆಯ ಚರಿತ್ರೆ ನಿರ್ಮಾಣದಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಆದ್ದರಿಂದ ಇದರ ಕುರಿತು ಅಧ್ಯಯನ ನಡೆಸುವುದು ಅಗತ್ಯವಾಗಿದ್ದು ಆಗ ಇತಿಹಾಸ ಸಂಶೋಧನೆ ಎಂಬುದು ಹೆಚ್ಚು ಪೂರ್ಣತೆಯನ್ನು ಪಡೆಯುತ್ತದೆ ಎಂದು ಹಾವನೂರರ ಅಭಿಪ್ರಾಯ.

ನಮ್ಮ ಪರಿಚಿತ ಭಾಷೆಯಲ್ಲಿರುವ ಅನೇಕ ಐತಿಹಾಸಿಕ ಅಂಶಗಳನ್ನು ಹೊರತಂದಿದ್ದೇವೆ, ಇತಿಹಾಸದ ಪರಿಧಿಯನ್ನು ವಿಸ್ತರಿಸಿದ್ದೇವೆ. ಆದರೆ ಪೋರ್ಚುಗೀಸ್, ಡಚ್, ಲ್ಯಾಟಿನ್, ಇಟಾಲಿಯಾನ್ ಮುಂತಾದ ಭಾಷೆಗಳಲ್ಲಿಯೂ ಕರ್ನಾಟಕ ಇತಿಹಾಸಕ್ಕೆ ಪೋಷಕವಾಗು

ವಂತಹ ದಾಖಲೆಗಳಿದ್ದು, ಈ ಭಾಷೆಯನ್ನು ತುಸು ಮಟ್ಟಿಗೆ ಅರ್ಥ ಮಾಡಿಕೊಳ್ಳುವಷ್ಟು ಕಲಿಯುವ ಅಗತ್ಯವಿದೆ ಅಲ್ಲದೆ ಮೃತಲಿಪಿಗಳಾದ ಮೋಡಿ, ತಿಗಳಾರಿಯಂಥವುಗಳೂ ಪ್ರಯೋಜನಕಾರಿ ಹಾಗಾಗಿ ಇದನ್ನು ಕಲಿಯುವ ಆಸಕ್ತಿಯುಳ್ಳವರಿಗೆ ಅನುದಾನವನ್ನು ಇತಿಹಾಸದ ಅಕಾಡೆಮಿಯಿಂದ ಕೊಡಬಹುದು.

ಇತ್ತೀಚೆಗೆ ಇತಿಹಾಸದ ಪರಿಧಿ ವಿಸ್ತಾರಗೊಂಡಿದ್ದರೂ ಸಹ ಕೆಲವೊಂದು ವಿಷಯಗಳು ಇನ್ನೂ ಉಳಿದಿದೆ ಅದನ್ನು ಗುರುತಿಸಿ ಅಧ್ಯಯನ ಕೈಗೊಳ್ಳಬೇಕಾಗಿದೆ. ರೈಸ್, ಪ್ಲೀಟ್‌ರಂತಹ ವಿದೇಶೀಯ ಹಾಗೂ ದೇಶೀಯ ವಿದ್ವಾಂಸರುಗಳ ಜೀವನ ಹಾಗೂ ಕೃತಿಗಳ ಪರಾಮರ್ಶೆಯನ್ನೊಳಗೊಂಡ ಪೂರ್ಣ ಸ್ವರೂಪದ ಅಧ್ಯಯನ ನಡೆಯಬೇಕಾಗಿದೆ. ಹಾಗೆಯೇ ವಿಜಯ ನಗರೋತ್ತರ ಕಾಲದ ಎಂದರೆ ಕ್ರಿ.ಶ. ೧೫೬೫ ರಿಂದ ೧೮೦೦ವರೆಗಿನ ಕರ್ನಾಟಕ ಚರಿತ್ರೆಯು ಮಸು ಮಸುಕಾಗಿದ್ದು ಇಲ್ಲಿ ಅಧ್ಯಯನ ನಡೆಯಬೇಕಿದೆ.

ಶಾಸನದಲ್ಲಿ ಅಥವಾ ಬೇರೆ ಐತಿಹಾಸಿಕ ದಾಖಲೆಯಲ್ಲಿ ಬಂದ ಘಟನೆ ಇಲ್ಲವೆ ಮಾಹಿತಿಯ ಸತ್ಯಾಸತ್ಯತೆಯನ್ನು ನಿಖರವಾಗಿ ನಿರ್ಧರಿಸುವುದು ಮಾತ್ರ ಕಠಿಣ ಕೆಲಸ. ಯಾಕೆಂದರೆ ದಾಖಲೆಗೊಂಡ ವಿಷಯ ತನ್ನಷ್ಟಕ್ಕೆ ನಿರ್ಜೀವವಾಗಿದ್ದು ಅದರ ಸತ್ಯಾಸತ್ಯತೆಯು ಅದನ್ನು ಓದುವವನನ್ನು, ಬರೆದವನನ್ನು ಅಥವಾ ಓದುವ ಸಂದರ್ಭದಲ್ಲಿ ಆ ಶಾಸನದ ಸ್ಥಿತಿಯನ್ನು ಅವಲಂಬಿಸಿರುತ್ತದೆ. ಇಲ್ಲಿ ತಪ್ಪುಗಳು ಉದ್ದೇಶ ಪೂರ್ವಕವಾಗಿ ಆಗಬಹುದು ಅಥವಾ ಅಜ್ಞಾನದಿಂದಲೂ ಆಗಬಹುದು, ಆದ್ದರಿಂದ ಸಂಶೋಧನೆಯಲ್ಲಿ ಶತಶಃ ಸತ್ಯ ಅನ್ನೋದು ಕನಸಿನ ಮಾತು.

### ಸಾಹಿತ್ಯಕಾರ ಮತ್ತು ಇತಿಹಾಸಕಾರ

ಸಾಹಿತ್ಯಕಾರ ಮತ್ತು ಇತಿಹಾಸಕಾರರು ಪರಸ್ಪರ ಪೂರಕವಾಗಿ ಕೆಲಸ ಮಾಡಿದಾಗ ಸಂಶೋಧನೆಯು ಹೆಚ್ಚು ಪೂರ್ಣತ್ವವನ್ನು ಪಡೆದುಕೊಳ್ಳುತ್ತದೆ. ನಾವು ಸಾಮಾನ್ಯವಾಗಿ ಶಾಸನಗಳು ತತ್ಕಾಲೀನವಾದ್ದರಿಂದ ಪ್ರಾಮಾಣ್ಯವೆಂದು ಬರೆಯುತ್ತೇವೆ. ಆದರೆ ಅದರಲ್ಲಿಯೂ ಪೂರ್ಣ ಸತ್ಯವನ್ನು ಕಾಣಲಾರೆವಾದ್ದರಿಂದ ಕಾವ್ಯಕೃತಿಗಳಿಂದ ಇತಿಹಾಸಗಳನ್ನು ಪುನರ್‍ರಚಿಸಬಹುದು. ಅಲ್ಲದೆ ಕೇವಲ ಶುದ್ಧ ಐತಿಹಾಸಿಕ ಕಾವ್ಯವಲ್ಲದೆ ಇತರ ಕಾವ್ಯಗಳ ಅಂತರ್ಯ ದಲ್ಲಿಯೂ ಅನೇಕ ಐತಿಹಾಸಿಕ ವಿಷಯ ವಿಚಾರಗಳು ಇರುತ್ತದೆ. ಇದಕ್ಕೆ ಹಾವನೂರರು ನೀಡುವ ದೃಷ್ಟಾಂತ ಎಸ್. ಶೆಟ್ಟರ್ ಅವರು ಕೇವಲ ಕನ್ನಡಕಾವ್ಯಗಳಿಂದ 'ತುಳಿಲಾಳ್ಗಳ್' ಎಂಬ ಭಟರ ಪಡೆಯನ್ನು ಶೋಧಿಸಿದುದು. ಜೋಳವಾಳಿ ವೇಳೆಗಾಳಿಗಳಂತೆ ಮಧ್ಯಯುಗದಲ್ಲಿ ಕಾಣಿಸಿಕೊಂಡ ಇವರ ಉಲ್ಲೇಖ ಶ್ರವಣಬೆಳಗೊಳದ ಒಂದೇ ಒಂದು ಶಾಸನದಲ್ಲಿ ಕಂಡು ಬರುತ್ತಿದ್ದು ಶೆಟ್ಟರ್, ಈ ಪಡೆಯ ಶೋಧಕ್ಕಾಗಿ ೩೧ ಹಳಹನ್ನಡ ಕಾವ್ಯಗಳನ್ನು ಪರಿಶೀಲಿಸಿದ್ದಾರಂತೆ. ಇನ್ನೊಂದು ಉದಾಹರಣೆ ಬೆಟಗೇರಿ ಕೃಷ್ಣ ಶರ್ಮರ ಸುದೀರ್ಘ ಪ್ರಬಂಧ ಕನಕದಾಸರು ಕಂಡ ವಿಜಯನಗರ. ಇಲ್ಲಿ ಲೇಖಕರು ಕನಕದಾಸ, 'ಮೋಹನ ತರಂಗಿಣಿ' ಎಂಬ ತನ್ನ ಪೌರಾಣಿಕ ಕಥಾ ವಸ್ತುವುಳ್ಳ ಕೃತಿಯಲ್ಲಿ ತಮಗರಿವಿಲ್ಲದಂತೆಯೇ ವಿಜಯನಗರ ಕಾಲದ ಜೀವನಾನುಭವವನ್ನು ಮೂಡಿಸಿದ್ದಾರೆ ಎಂಬುದು

ಹಾವನೂರರ ಅಭಿಮತ.

ಅಲ್ಲದೆ ಬೇರೊಂದು ಪದ್ಯದಲ್ಲಿ ಕನಕದಾಸರ ಕಾಲಕ್ಕೆ ಹಸ್ತಪ್ರತಿಕಾರ ವೃತ್ತಿಯ ಬ್ರಾಹ್ಮಣ ಕನ್ನಡಕ ಧರಿಸಿದ್ದುದು ತಿಳಿದು ಬರುತ್ತದೆ. ವಿಜಯನಗರದ ಕೃಷ್ಣದೇವರಾಯನ ಗುರುಗಳಾದ ವ್ಯಾಸರಾಯರು ಕನ್ನಡಕ ಧರಿಸುತ್ತಿದ್ದರೆಂಬ ಮಾತು 'ವ್ಯಾಸಯೋಗಿ ಚರಿತ' ಕಾವ್ಯದಿಂದ ತಿಳಿದು ಬರುತ್ತದೆ.

ಸ್ವತಃ ಸಂಶೋಧಕರಾದ ಹಾವನೂರರು, ಕಂಡುಕೊಂಡ ಸತ್ಯವನ್ನು ವಿವರಿಸುತ್ತಾ ಕಾವ್ಯದಲ್ಲಿ ಜನಜೀವನದ ಪಡಿನೆರಳು ಅದೆಂತು ಹಾಸುಹೊಕ್ಕಾಗಿದೆ ಎಂದು ದಾಸ ಸಾಹಿತ್ಯ ಅನ್ವೇಷಣೆಯ ಸಂದರ್ಭದಲ್ಲಿ ಅವರಿಗೆ ದೊರೆತ ವರಾಹ ತಿಮ್ಮಪ್ಪನವರ ೧೮ನೇ ಶತಮಾನದ 'ತಿರುಪತಿಯಾತ್ರೆ' ಎಂಬ ಕಾವ್ಯವನ್ನು ಉದಾಹರಿಸುತ್ತಾರೆ.ಇಲ್ಲಿ ವರಾಹ ತಿಮ್ಮಪ್ಪರು ತಾವು ತಿರುಪತಿಗೆ ಹೋಗುವ ಮುನ್ನ ಓರ್ವ ದಾಸರನ್ನು ಬರಮಾಡಿ ಆತಿಥ್ಯಗೈದುದನ್ನು ಹಾಡಿದ್ದಾರೆ. ಆ ದಾಸರು ಯಾರು ಎಂದು ಹುಡುಕುತ್ತಾ ಹೋದಾಗ ಅದು ಇಂತಹವರೇ ಆಗಬೇಕೆಂದಿಲ್ಲ. ಮನೆಗೆ ಕರೆದು ತಿಮ್ಮಪ್ಪನ ಕೃಪೆಯನ್ನು ಕೋರುವ ಪರಿಪಾಠವದು ಎಂದು ತಿಳಿಯಿತು. ಮತ್ತದು ೨೦ನೇ ಶತಮಾನದವರೆಗೂ ನಡೆದು ಕೊಂಡು ಬಂದಿತ್ತು. ಈ ವಿಶಿಷ್ಟ ಸಂಪ್ರದಾಯದ ಪರಿಚಯವು ಕಾವ್ಯದ ಮೂಲಕವೇ ತಿಳಿದು ಬಂತು ಎಂದು ಹಾವನೂರರು ಹೇಳುತ್ತಾರೆ.

ಕನ್ನಡ ಸಾಹಿತ್ಯದ ವಿವಿಧ ಘಟ್ಟಗಳ ಚರಿತ್ರೆಯನ್ನು ಬರೆಯುವವರು ಆ ಕಾಲದ ರಾಜಕೀಯ, ಸಾಮಾಜಿಕ ಅಂಶಗಳನ್ನು ಕೂಲಂಕಷವಾಗಿಯೇ ವಿವರಿಸುತ್ತಾರೆ. ಉದಾಹರಣೆಗೆ ಮೈಸೂರು ಹಾಗೂ ಬೆಂಗಳೂರು ವಿಶ್ವವಿದಾನಿಲಯಗಳು ಹೊರ ತಂದಿರುವ ಸಾಹಿತ್ಯ ಚರಿತ್ರೆಯ ಸಂಪುಟಗಳನ್ನು ನೋಡಬಹುದು, ಆದರೆ ಇತಿಹಾಸದ ಸಂಪುಟಗಳನ್ನು ನೋಡಿದಾಗ ಸಾಹಿತ್ಯ ವಿಚಾರವು ನೆಪ ಮಾತ್ರ ಬರುತ್ತದೆ ಎಂದು ಹಂಪಿ ಕನ್ನಡ ವಿಶ್ವವಿದ್ಯಾಲಯದವರು ಹೊರತಂದ ಸಮಗ್ರ ಕರ್ನಾಟಕ ಚರಿತ್ರೆಯ ೩ ಸಂಪುಟಗಳನ್ನು ಉದಾಹರಿಸುತ್ತಾರೆ. ಇದರಲ್ಲಿ ವಿಜಯನಗರದಷ್ಟೇ ವೈಭವಯುತವಾದ ರಾಷ್ಟ್ರಕೂಟ, ಕಲ್ಯಾಣ ಚಾಳುಕ್ಯ, ಕಲಚೂರಿಗಳು ಮತ್ತು ವಾರಂಗಲ್ಲಿನ ಕಾಕತೀಯರು ಇವಿಷ್ಟು ರಾಜ ಮನೆತನಗಳು ಆಳಿದ ೭೦೦ ವರ್ಷಕ್ಕೆ ಮೀಸಲಾಗಿಟ್ಟಿದ್ದು ೩೦೦ ಪುಟಗಳು ಮಾತ್ರ. ಅದರಲ್ಲಿ ಆ ಕಾಲದ ಸಾಹಿತ್ಯಕ್ಕೆ ಕೇವಲ ೨೦ ಪುಟಗಳನ್ನು ಮಾತ್ರ ನೀಡಲಾಗಿದೆ ಎಂದು ಬೇಸರಿಸಿದ್ದಾರೆ. ಅಲ್ಲದೆ ಕಲಚೂರಿ ಕಾಲದಲ್ಲಿ ವೀರಶೈವ ಕ್ರಾಂತಿಯಾಗಿದ್ದು ಇದಕ್ಕೆ ವಚನ ಸಾಹಿತ್ಯವೇ ಪ್ರಮುಖ ಆಧಾರ. ಆದರೆ ಕೇವಲ ಬಸವಣ್ಣನವರ ವಚನವನ್ನಷ್ಟೇ ಬಳಸಿದ್ದಾರೆ. ಈ ರೀತಿಯಾದ ಸಾಹಿತ್ಯದ ಅವಜ್ಞೆ ನಡೆಯಬಾರದೆಂಬುದು ಹಾವನೂರರ ಅಭಿಮತ.

## ಸಂಶೋಧನೆಯಲ್ಲಿ ಹೊಸತನ

ಇತಿಹಾಸ ಸಂಶೋಧನವು ಒಂದು ಪರಂಪರಾಗತ ಕ್ರಮದಲ್ಲಿ ನಡೆದು ಬಂದಿದ್ದು ಅದರ ಬದಲಾಗಿ ಅಸಂಪ್ರದಾಯಕ ಮತ್ತು ನವೀನ ಕ್ರಮವನ್ನು ಅನುಸರಿಸಬೇಕಾಗಿದ್ದು, ಸಂಶೋಧಕನು ಸಂಶಯಕೋರನಾಗಿರಬೇಕು, ಪತ್ತೇದಾರನಾಗಬೇಕು, ನ್ಯಾಯಾಧೀಶನಾಗ

ಬೇಕು. ಮತ್ತು ಆಯ್ದ ವಿಷಯದ ಕುರಿತಾದ ನಂಟು, ಆಯ್ದ ವಿಷಯವನ್ನು ಮುಗಿಸುವ ಛಲ ಈ ಐದು ಗುಣಗಳನ್ನು ಹೊಂದಿದವನಾಗಿರಬೇಕು, ಎಂದು ಹೇಳಿ ಜಾಗತಿಕ ವೀರಾಗ್ರಣಿ ನೇಪೋಲಿಯನ್ನನ ಸಾವಿನ ರಹಸ್ಯವನ್ನು ಡಾ.ಪುಟ್ ಎಂಬ ವ್ಯಕ್ತಿ ಭೇದಿಸಿದ ವಿಷಯವನ್ನು ಈ ಗುಣಗಳಿಗೆ ಉದಾಹರಿಸುತ್ತಾರೆ. ನೆಪೋಲಿಯನ್ ಸೇಂಟ್ ಹೆಲೆನಾದಲ್ಲಿ ಉದರ ರೋಗದಿಂದ ಸತ್ತ ಎಂದು ವರದಿಯಾದ ಸುಮಾರು ನೂರಿಪ್ಪತ್ತು ವರ್ಷಗಳ ನಂತರ ನೆಪೋಲಿಯನ್ನನ ಅಭಿಮಾನಿ ಡಾ। ಪುಟ್ ಗೆ ಸಂಶಯ ಮೂಡಿ ಆ ವಿಷಯದ ಕುರಿತಾಗಿ ಯೋಚಿಸುತ್ತಿದ್ದ. ಅವನು ನಿಜವಾಗಿಯೂ ಉದರ ರೋಗದಿಂದ ಸತ್ತನೇ? ಅವನಿಗೆ ಉತ್ತಮ ಆಹಾರವೇ ಸಿಗುತ್ತಿತ್ತಲ್ಲಾ ಎಂದು ಯೋಚಿಸಿದ. ಅವನ ಮರಣೋತ್ತರ ಪರೀಕ್ಷೆಯ ವರದಿ ಓದಿದಾಗ ಕಾಲು ಬಾತಿದ್ದು, ಹೊಟ್ಟೆ ಊದಿಕೊಂಡಿದ್ದ ವಿಷಯ ತಿಳಿದ. ಆದರೆ ಉದರ ರೋಗದಿಂದ ದೇಹ ಸೊರಗುವುದಿಲ್ಲವಲ್ಲ ಎಂಬ ಸಂಶಯ ಬೆಳೆಯುತ್ತಾ ಹೋಗಿ ವಿಷಸೇವನೆಯಿಂದ ಹೀಗಾಗುತ್ತದೆ ಎಂದು ತಿಳಿದ ಈತ ಈ ಬಗ್ಗೆ ಪತ್ತೆದಾರಿ ಕೆಲಸಕ್ಕೆ ತೊಡಗಿದ. ನೆಪೋಲಿಯನ್ನನ ಕೂದಲಿನ ಅನ್ವೇಷಣೆ ಮಾಡಿ, ಪರೀಕ್ಷೆ ಮಾಡಿದಾಗ ಅವನ ಸಂಶಯ ನಿಜವಾಗಿತ್ತು. ಮುಂದೆ ಇನ್ನಷ್ಟು ಕೂದಲನ್ನು ಸಂಗ್ರಹಿಸಿ ಅಧ್ಯಯನ ನಡೆಸಿದಾಗ ಅವನನ್ನು ಇಲಿಪಾಷಾಣದಂಥ ಸಾದಾ ವಿಷವನ್ನು ನಿಧಾನವಾಗಿ ನೀಡಿ, ಫ್ರಾನ್ಸಿನ ರಾಜಮನೆತನದವನೊಬ್ಬ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ಕೊಲೆ ಮಾಡಿಸಿದ್ದ.

ಇನ್ನು ಅಂತಿಮ ನಿರ್ಧಾರಕ್ಕೆ ಬರುವುದರ ಮೊದಲು ನ್ಯಾಯಾಧೀಶನಂತೆ; ಸ್ಯಾಂಫಲ್ ನೆಪೋಲಿಯನ್ನನದೆ? ಪ್ರಯೋಗಕ್ಕೆ ಒಳಪಡಿಸಿದ ಸ್ಮಿತ್ ಪ್ರಾಮಾಣಿಕನೇ? ಹಾಕಿದ್ದು ಇಲಿ ಪಾಷಾಣವೇ? ಇತ್ಯಾದಿಯಾಗಿ ಯೋಚಿಸಿ ಕಡೆಗೆ ತೀರ್ಮಾನಕ್ಕೆ ಬಂದ. ಹಾವನೂರರು ಇಂತಹ ಸಂಶೋಧನೆಗಳು ಬರಬೇಕಾಗಿದೆ ಎಂಬ ಆಶಯವನ್ನು ಈ ಉದಾಹರಣೆಯೊಂದಿಗೆ ನೀಡುತ್ತಾರೆ.

ಕಂಪ್ಯೂಟರನ್ನು ಸಂಶೋಧನೆಗೆ ಅಗತ್ಯವಾಗಿ ಬಳಸಬೇಕು ಹಾಗೂ ಅದಕ್ಕೆ ಬೇಕಾದಷ್ಟು ಮಾಹಿತಿಗಳು ಇತಿಹಾಸದಲ್ಲಿ ಇದೆ ಎಂದು ಹೇಳಿ ಕಾಲಾನುಕ್ರಮದಲ್ಲಿ ಸಂಕ್ಷಿಪ್ತವಾಗಿ ಘಟನೆಗಳನ್ನು ಕೊಡುವಂಥ ಒಂದು ಡೈರೆಕ್ಟರಿ ಮತ್ತು ಸಮಗ್ರ ಕರ್ನಾಟಕದ ನಾನಾ ವಿಧವಾದ ಆಕರಗಳನ್ನು ಒಂದೆಡೆ ಶೇಖರಿಸುವ ಎರಡು ಕಂಪ್ಯೂಟರ್ ಯೋಜನೆಗಳನ್ನು ಮುಂದಿಡುತ್ತಾರೆ.

**ವಸ್ತು ವಿಶ್ಲೇಷಣೆ**

ಸದ್ಯದ ಸಂಶೋಧನಾ ಕ್ರಮವಾದ ಹತ್ತಾರು ಆಕರಗಳಿಂದ ಮಾಹಿತಿಯನ್ನು ಕಲೆಹಾಕಿ, ನಮಗೆ ಸರಿ ಕಂಡಂತೆ ಹೊಂದಿಸಿಕೊಂಡು, ಅವುಗಳಿಂದ ಹೊಸ ಅಂಶಗಳನ್ನು ಗುರುತಿಸಿ ಸಂಪ್ರಬಂಧ ಬರೆಯುವ ಕ್ರಮದಿಂದ ಕೆಲವೊಮ್ಮೆ ಅಸಮರ್ಪಕತೆಗಳು ಮೂಡುವ ಸಾಧ್ಯತೆ ಇದ್ದು, ಇದನ್ನು ಸರಿಪಡಿಸಲು ವಸ್ತು ವಿಶ್ಲೇಷಣಾ ಕ್ರಮವನ್ನು ಅನುಸರಿಸಬಹುದು. ಇದರಲ್ಲಿ ನಮ್ಮಲ್ಲಿ ಸಂಗ್ರಹವಾದ ಮಾಹಿತಿಯ ವಸ್ತುವನ್ನು ನಿರ್ದಿಷ್ಟವಾಗಿ ಗುರುತಿಸಿ ಅದರ ವಿಶ್ಲೇಷಣೆಯನ್ನು ಕೈಗೊಳ್ಳಬಹುದು ಎಂದು ಹಾವನೂರರ ಅಭಿಪ್ರಾಯ.

**ಭವಿಷ್ಯದ ಅಧ್ಯಯನ**

ಇತಿಹಾಸ ಸಂಶೋಧನೆಯು ಈ ಹಿಂದೆ ಆದದ್ದನ್ನು ವಿವರಿಸುತ್ತದೆ. ಹಾವನೂರರ ಯೋಜನೆಯಂತೆ ಈ ಗತಕಾಲದ ಅಧ್ಯಯನದ ಆಧಾರದಿಂದ ಭವಿತವ್ಯದ ಅಧ್ಯಯನವನ್ನು ನಡೆಸುವುದೂ ಅವಶ್ಯಕವಾಗಿದೆ. ಇದರಿಂದ ಮುಂದೆ ಆಗಬಹುದಾದ ಅನಾಹುತಗಳನ್ನು ತಪ್ಪಿಸಬಹುದು. ಇದಕ್ಕೆ ಎರಡು ಮಿತಿಗಳಿದ್ದು ಒಂದು ಕಾಲದ ಮಿತಿ. ಮುಂದಿನ ೫೦೦ ವರ್ಷಗಳ ಅನಂತರದ ಭವಿಷ್ಯಕ್ಕಿಂತ ೫೦ ವರ್ಷಗಳಲ್ಲಿ ಏನಾಗಬಹುದೆಂದು ಯೋಚಿಸಬಹುದು. ಅದರಂತೆ ಆಯ್ದುಕೊಂಡ ವಿಷಯದ ವ್ಯಾಪ್ತಿಯೂ ಮಿತಿಯಲ್ಲಿರಬೇಕು.

ಈ ಹಿಂದೆ ಅತೀ ವಿಶಾಲವಾಗಿದ್ದ ಭರತಖಂಡದಿಂದ ಇಂದು ಟಿಬೇಟ್, ನೇಪಾಳ, ಬರ್ಮಾ, ಶ್ರೀಲಂಕಾ, ಪೂರ್ವ ಅಫಘಾನಿಸ್ತಾನ, ಪಾಕಿಸ್ತಾನಗಳು ಬೇರೆಯಾಗಿದೆ. ಬ್ರಿಟಿಷರ ಕಾಲದಲ್ಲಿ ಹೊಸ ರಾಜ್ಯ ಗಡಿಗಳು ನಿರ್ಮಾಣವಾದುವು, ಸ್ವಾತಂತ್ರ್ಯ ನಂತರ ಭಾಷಾವಾರು ರಾಜ್ಯ ವಿಭಾಗವಾಯಿತು, ಆ ನಂತರ ಮತ್ತೆ ಹೊಸ ರಾಜ್ಯ ನಿರ್ಮಾಣವಾಗುತ್ತಿದೆ. ಕರ್ನಾಟಕ ಕಿರಿದಾಗುತ್ತಾ ಬಂದಿದೆ, ಗಡಿ ಸಮಸ್ಯೆಯನ್ನು ಎದುರಿಸುತ್ತಿದೆ. ಇದರ ಆಧಾರದಲ್ಲಿ ಮುಂದೇನಾಗಬಹುದೆಂಬ ಪ್ರಶ್ನೆ ಮೂಡಬೇಕು. ಉತ್ತರಕ್ಕಾಗಿ, ಪರಿಹಾರಕ್ಕಾಗಿ ಪ್ರಯತ್ನಿಸಬೇಕಾಗಿದೆ. ಇದಕ್ಕೆ ಭವಿಷ್ಯದ ಅಧ್ಯಯನ ಅಗತ್ಯವಿದೆ.

ಹಾಗೆಯೇ ಕರ್ನಾಟಕದ ಸರ್ವಾಂಗೀಣ ಇತಿಹಾಸದ ಒಂದು ವೆಬ್‌ಸೈಟ್ (ಅಂತರ್ಜಾಲ ತಾಣ) ರೂಪಿಸುವ ಅಗತ್ಯವನ್ನು ಹಾವನೂರರು ಒತ್ತಿ ಹೇಳುತ್ತಾರೆ. ಜಗತ್ತಿನಾದ್ಯಂತ ಇಂದು ನಾನಾ ವಿಧವಾದ ವಿಷಯಗಳ ಕುರಿತ ವೆಬ್‌ಸೈಟ್‌ಗಳು ಹುಟ್ಟಿಕೊಂಡಿದೆ. ಕರ್ನಾಟಕದಲ್ಲಿಯೂ ವಚನ ಸಾಹಿತ್ಯ ದಾಸ ಸಾಹಿತ್ಯಗಳ ವೆಬ್‌ಸೈಟ್ ಸಿದ್ಧವಾಗಿದೆ. ಅದರಂತೆ ಕನ್ನಡ ಪತ್ರಿಕಾ ಪ್ರಪಂಚ, ಕನ್ನಡ ಗ್ರಂಥ ಸಂಪದ ಇವುಗಳ ಅಂತರ್ಜಾಲದ ತಾಣಗಳು ಸಿದ್ಧವಾಗುತ್ತಿದ್ದು ಇದು ಕರ್ನಾಟಕದ ಇತಿಹಾಸಕ್ಕೂ ಆಗಬೇಕಿದೆ. ಇದರಿಂದಾಗಿ ವಿದ್ಯಾರ್ಥಿಗಳಿಂದ ಹಿಡಿದು ಇತಿಹಾಸ ತಜ್ಞರಿಗೂ ಯಾವೊಂದು ವಿಷಯದ ಬಗ್ಗೆ ನಿಖರವಾದ ಮಾಹಿತಿ ಬೇಕಿದ್ದರೂ ತಕ್ಷಣವಾಗಿ ಪಡೆಯಬಹುದಾಗಿದೆ. ಇದರಿಂದ ಸಂಶೋಧನೆ ಮಾತ್ರವಲ್ಲ ಇತಿಹಾಸದ ಅಧ್ಯಯನಕ್ಕೂ ಸಹಕಾರಿಯಾಗಲಿದೆ ಎಂದು ಹಾವನೂರರ ಭಾವನೆ. ಹೀಗೆ ಸದಾ ಹೊಸತನದ ಹುಡುಕಾಟದಲ್ಲಿರುವ ಹಾವನೂರರು ಸಂಶೋಧನೆಯಲ್ಲಿಯೇ ಹೊಸತನವನ್ನು ಕಂಡುಕೊಂಡಿದ್ದಾರೆ ಮತ್ತು ಅಂತಹ ವಿಧಾನವನ್ನು ಅನುಸರಿಸುವಂತೆ ಎಲ್ಲರಿಗೂ ಕರೆ ನೀಡಿದ್ದಾರೆ.

## ಪತ್ರಿಕೋದ್ಯಮ

ಡಾ। ಶ್ರೀನಿವಾಸ ಹಾವನೂರರು ಪತ್ರಿಕೋದ್ಯಮವನ್ನು ವೃತ್ತಿಯಾಗಿ, ಪ್ರವೃತ್ತಿಯಾಗಿ ಸ್ವೀಕರಿಸಿದವರು. ಅದರ ಒಳಹೊರಗನ್ನು ಚೆನ್ನಾಗಿ ಅರಿತವರು. ಪತ್ರಿಕೋದ್ಯಮವನ್ನು ಸಂಶೋಧನಾ ಕ್ಷೇತ್ರವನ್ನಾಗಿ ಆಯ್ದುಕೊಂಡು ೧೯-೨೦ನೇ ಶತಮಾನಗಳಲ್ಲಿ

ಪ್ರಕಟವಾಗುತ್ತಿದ್ದು ಈಗ ಕಣ್ಮರೆಯಾಗಿರುವ ಪತ್ರಿಕೆಗಳ ಕುರಿತಾದ ಅನೇಕ ಅಪೂರ್ವ ಮತ್ತು ಅಜ್ಞಾತ ವಿವರಗಳನ್ನು ಹೊರತಂದರು. ಕನ್ನಡ ಪತ್ರಿಕೋದ್ಯಮಕ್ಕೆ ಸುಮಾರು ೧೫೦ ವರ್ಷಗಳ ಸುದೀರ್ಘವಾದ ಇತಿಹಾಸವಿದ್ದರೂ ಅದನ್ನು ಖಚಿತವಾಗಿ ದಾಖಲಿಸುವ ಕಾರ್ಯ ಪೂರ್ಣಪ್ರಮಾಣದಲ್ಲಿ ಆಗಿರಲಿಲ್ಲ. ಇದನ್ನು ಮನಗಂಡ ಡಾ। ಹಾವನೂರರು ವಿದೇಶಗಳ ಗ್ರಂಥಾಲಯಗಳಲ್ಲಿ ದೊರಕಿದ ಪ್ರಮುಖ ದಾಖಲೆಗಳ ಸಹಾಯದಿಂದ, ವರದಿಗಳ ಆಧಾರದಿಂದ ಹಾಗೂ ಆಂಗ್ಲರ ಆಡಳಿತ ಕಾಲದಲ್ಲಿ ಪ್ರಕಟವಾಗುತ್ತಿದ್ದ Report on nature press ಎಂಬ ವರದಿಯ ಸಹಾಯದಿಂದ ಕನ್ನಡ ಪತ್ರಿಕೋದ್ಯಮದ ಇತಿಹಾಸವನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದರು. ಡಾ। ಹಾವನೂರರು ಹಾಗೂ ಶಿವಮೊಗ್ಗ ಜಿಲ್ಲೆಯ ಬಂದಗದ್ದೆಯ ಪತ್ರಿಕಾ ಸಂಗ್ರಾಹಕ ಮೋಹನ ಹೆಗಡೆಯವರು ಸಮಾನ ಮನೋಧರ್ಮದ ಇತರ ಸ್ನೇಹಿತರೊಂದಿಗೆ ಸೇರಿ 'ಪತ್ರಿಕಾ ಭಾಸರಣ' ಸಂಸ್ಥೆಯನ್ನು ಹುಟ್ಟು ಹಾಕಿ ಕನ್ನಡ ಪತ್ರಿಕೋದ್ಯಮದ ಇತಿಹಾಸದ ಕಡೆಗೆ ಬೆಳಕು ಹಾಯಿಸುವಲ್ಲಿ ಸಾಂಸ್ಥಿಕತೆಯ ಸ್ವರೂಪವನ್ನು ನೀಡಿದರು. ಹಾಗೆಯೇ ಡಾ। ಹಾವನೂರರು ತರಂಗ ವಾರಪತ್ರಿಕೆಯ ೧೯೯೪ರ ಜನವರಿ ತಿಂಗಳಿನ ನಾಲ್ಕು ಸಂಚಿಕೆಗಳಲ್ಲಿ 'ಕನ್ನಡ ಪತ್ರಿಕೋದ್ಯಮದ ೧೫೦ ವರ್ಷ' ಎಂಬ ಲೇಖನದಲ್ಲಿ ಇವನ್ನೆಲ್ಲಾ ವಿವರವಾಗಿ ಬರೆದರು. ಹೀಗೆ ಆರಂಭಿಸಿದ ಕೈಂಕರ್ಯ ಕೊನೆಗೊಂಡದ್ದು ೨೦೦೭ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾದ ೧೪೦೦ ಪತ್ರಿಕೆಗಳ 'ಕನ್ನಡ ಪತ್ರಿಕಾಸೂಚಿ'ಯೊಂದಿಗೆ. ಪ್ರಸ್ತುತ ಹಾವನೂರರ ಕನ್ನಡ ಪತ್ರಿಕೋದ್ಯಮದ ಸಂಶೋಧನೆಗೆ ನಿಲುಕಿದ ಸತ್ಯವನ್ನು ಚರ್ಚಿಸಲಾಗಿದೆ.

ಡಾ। ಹಾವನೂರರು ಪತ್ರಿಕೋದ್ಯಮದ ಚರಿತ್ರೆಯನ್ನು ಕಾಲಮಾನದ ದೃಷ್ಟಿಯಿಂದ ಮೂರು ಘಟ್ಟಗಳಾಗಿ ಗುರುತಿಸಿಕೊಂಡಿದ್ದಾರೆ. ಅವುಗಳು

- ಪ್ರಾರಂಭದ ಹಾಗೂ ಪ್ರಯೋಗಶೀಲತೆಯ ಕಾಲ – ೧೯೪೩–೧೯೨೦
- ಸ್ವಾತಂತ್ರ್ಯ ಹೋರಾಟದ, ತಾರುಣ್ಯದ ಹುಮ್ಮಸ್ಸಿನ ಕಾಲ –೧೯೨೦–೧೯೪೭
- ಸ್ವಾತಂತ್ರ್ಯ ನಂತರದ ವಿಸ್ತಾರ ವೈವಿಧ್ಯಗಳಿಂದ ಕೂಡಿದ ಪ್ರೌಢಕಾಲ–೧೯೪೭ – ೧೯೭೦

## ಪ್ರಾರಂಭದ ಹಾಗೂ ಪ್ರಯೋಗಶೀಲತೆಯ ಕಾಲ ೧೮೪೩–೧೯೨೦

ಆರಂಭದ ಕಾಲವನ್ನು ಹಾವನೂರರು ಪ್ರಯೋಗಶೀಲತೆಯ ಕಾಲ ಎಂದು ಗುರುತಿಸಿದ್ದು, ಆ ಪ್ರಯೋಗಶೀಲತೆಯನ್ನು ಕನ್ನಡದ ಮೊದಲ ಪತ್ರಿಕೆಯಾದ 'ಮಂಗಳೂರು ಸಮಾಚಾರ'ದಲ್ಲಿ ಗುರುತಿಸಿದ್ದಾರೆ. ಆ ಪತ್ರಿಕೆಯಲ್ಲಿದ್ದ ಸರ್ವರಾಜ್ಯ ವರ್ತಮಾನಗಳು, ಸಾಮತಿಗಳು, ದಾಸರ ಪದಗಳು, ಭಾರತದ ಜನಸಂಖ್ಯೆ, ಇಂಗ್ಲೆಂಡ್ ರಾಜ್ಯದ ಆದಾಯ, ವೆಚ್ಚ, ಚೀನಾ ದೇಶದಲ್ಲಿ ನಡೆದ ಯುದ್ಧ ಇವೆಲ್ಲವು ಆ ಪತ್ರಿಕೆಯಲ್ಲಿದ್ದುದನ್ನು ಉದಾಹರಿಸುತ್ತಾರೆ.

ಕನ್ನಡ ಪತ್ರಿಕಾ ವ್ಯವಸಾಯವನ್ನು ನಿಯಮಿತ ಗೊಳಿಸಿದವರು ಭಾಷ್ಯಂ ಕುಟುಂಬ ದವರು ಎಂದು ಗುರುತಿಸಿದ ಹಾವನೂರರು ಅವರು ಮೈಸೂರು ವೃತ್ತಾಂತ ಬೋಧಿನಿ

ಯೆಂಬ ವಾರಪತ್ರಿಕೆಯನ್ನು ೧೮೫೯ರಲ್ಲಿ ಆರಂಭಿಸಿ ಅದನ್ನು ೫ ವರ್ಷ ಕಾಲ ಮುನ್ನಡೆಸಿದರು. ಮೈಸೂರು ವೃತ್ತಾಂತ ಬೋಧಿನಿಯ ಬದಲಿಗೆ 'ಕರ್ನಾಟಕ ಪ್ರಕಾಶಿಕಾ' ಎಂಬ ಪಕ್ಷಪತ್ರಿಕೆಯನ್ನು ೧೮೬೫ರಲ್ಲಿ ಪ್ರಾರಂಭಿಸಿ ೩-೪ ವರ್ಷ ನಡೆಸಿದರು ಮುಂದೆ ಅದನ್ನು ವಾರಪತ್ರಿಕೆಯಾಗಿ ನಡೆಸಿಕೊಂಡು ಹೋದರು. ಈ ಎಲ್ಲಾ ಸಾಧನೆಗಾಗಿ ಅವರನ್ನು ನಾವು ಕನ್ನಡ ಪತ್ರಿಕಾ ಪಿತಾಮಹರೆಂದು ಕರೆಯಬೇಕೆಂದು ಅಭಿಪ್ರಾಯ ಪಡುತ್ತಾರೆ.

ಮೈಸೂರು ವೃತ್ತಾಂತ ಬೋಧಿನಿ ಹಾಗೂ 'ಕರ್ನಾಟಕ ಪ್ರಕಾಶಿಕೆಯ' ಕೆಲವು ಸಂಪುಟಗಳನ್ನು ಬೆಂಗಳೂರಿನ ಗೋಖಲೆ ಸಂಸ್ಥೆಯಲ್ಲಿಯೂ ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರೆರಿಯಲ್ಲಿಯೂ ಪತ್ತೆಹಚ್ಚಿ ಪರಿಶೀಲನೆ ಮಾಡಿ ಪತ್ರಿಕೆಯ ಉದ್ದೇಶವನ್ನು ಮತ್ತು ಜನತೆಯ ಪತ್ರಿಕಾಪ್ರಜ್ಞೆಯನ್ನು ಕಂಡು ಹೆಮ್ಮೆಪಡುತ್ತಾರೆ.

'ಬೋಧಿನಿ' ಅಸ್ತಿತ್ವದಲ್ಲಿ ಬಂದ ಒಂದು ವರ್ಷದೊಳಗೆ ಬೆಳಗಾವಿಯಲ್ಲಿ 'ಕನ್ನಡ ಜ್ಞಾನಬೋಧಕ' ಎಂಬ ಪತ್ರಿಕೆ ಆರಂಭವಾಯಿತು. ಮುಂದೆ ಮುಂಬಯಿ ಸರಕಾರವು ಪತ್ರಿಕೆಯನ್ನು ನಡೆಸಲು ಬಾಸೆಲ್ ಮಿಶನ್ನಿನವರಿಗೆ ಅನುದಾನ ರೂಪದಲ್ಲಿ ಆದೇಶ ನೀಡಿದಾಗ ಅದು ಜೂನ್ ೧೮೬೭ ರಿಂದ 'ವಿಚಿತ್ರ ವರ್ತಮಾನ ಸಂಗ್ರಹ' ಎಂಬ ಹೆಸರಿನಲ್ಲಿ ಪತ್ರಿಕೆಯನ್ನು ಆರಂಭಿಸಿತು. ಈ ಎರಡು ಪತ್ರಿಕೆಗಳೂ ಶಿಕ್ಷಣ, ಇತರ ವಿಶೇಷ ಜ್ಞಾನ ಮತ್ತು ಆಡಳಿತದಲ್ಲಿ ಬರುವ ಇಂಗ್ಲೀಷ್‌ಗಳ ಕನ್ನಡ ರೂಪವನ್ನು ಕೊಡುತಿತ್ತು. 'ಕೇನರೀಜ್ ವರ್ನಾಕ್ಯುಲರ್ ಸೊಸೈಟಿಯು ಹಣ ಕೊಡುವುದನ್ನು ನಿಲ್ಲಿಸಿದಾಗ ಈ ಪತ್ರಿಕೆಯೂ ನಿಂತು ಹೋಯಿತು.

ಸರಕಾರದ ಶಿಕ್ಷಣ ಶಾಖೆಯಿಂದ ಪೋಷಿತವಾದ 'ಮಠ ಪತ್ರಿಕೆ' ಆ ಕಾಲದ ಮುಂಬಯಿ ಕರ್ನಾಟಕದ ಮೂಲೆ ಮೂಲೆಗಳಲ್ಲಿ ಹೋಗುತ್ತಿದ್ದು ಡೆಪ್ಯೂಟಿ ಚೆನ್ನಬಸಪ್ಪನವರ ಕನ್ನಡ ಮಂತ್ರದಂಡದಿಂದಾಗಿ ಅದು ಶೇ.೧೦೦ರಷ್ಟು ಕನ್ನಡ ಪತ್ರಿಕೆಯಾಗಿಯೇ ಹೊರಬಂದು, ಪ್ರಾಥಮಿಕ ಶಾಲೆಗಳಿರುವ ಹಳ್ಳಿಹಳ್ಳಿಗೂ ಪ್ರಸಾರ ಹೊಂದಿತ್ತು. ೧೮೪೩ರಿಂದ ಮುಂದಿನ ೪೦ ವರ್ಷಗಳ ವರೆಗೆ ಹೊರಟ ಪತ್ರಿಕೆಗಳು ಕೇವಲ ೨೫. ಅವುಗಳಲ್ಲಿ ನಾಲ್ಕೈದು ಬಿಟ್ಟರೆ ಉಳಿದವುಗಳು ಅಲ್ಪಾಯುಷಿ. ಅವುಗಳ ಪ್ರಸಾರ ನೂರರಿಂದ ೫೦೦ರವರೆಗೆ ಆದರೆ ಅವುಗಳಿಗೆ ಅಗ್ಗದ ಜನಪ್ರಿಯತೆ ಗಳಿಸುವ ಉದ್ದೇಶವಿರಲಿಲ್ಲ. ಲೋಕ ಶಿಕ್ಷಣವೇ ಅವರ ಗುರಿಯಾಗಿದ್ದಿತು. ಎಂದು ಹಾವನೂರರು ಗುರುತಿಸಿಕೊಂಡಿದ್ದಾರೆ.

೧೮೮೦ ನಂತರದ ಪತ್ರಿಕೆಗಳ ಹುಟ್ಟು ಮತ್ತು ಧೋರಣೆಯಲ್ಲಿ ಹಾವನೂರರು ಹೊಸ ದಿಸೆಯನ್ನು ಗುರುತಿಸುತ್ತಾರೆ. ಅವರ ಪ್ರಕಾರ ೧೮೮೧ರಲ್ಲಿ ಪ್ರಾರಂಭವಾದ ಪ್ರಜಾಪ್ರತಿನಿಧಿ ಸಭೆಯೇ ಇದಕ್ಕೆ ಕಾರಣ. ಈ ಸಭೆಯ ಮುಖ್ಯ ಕೆಲಸ ಆಡಳಿತದ ಕುಂದುಕೊರತೆಗಳನ್ನು ಎತ್ತಿ ತೋರಿಸುವುದು. ಪತ್ರಿಕೆಗಳು ಅದರ ಕೆಲಸಕ್ಕೆ ಪೂರಕವಾಗಿ ಸಹಕರಿಸಿದ್ದು ಅಲ್ಲದೆ ಇಂಗ್ಲಿಷ್ ಶಿಕ್ಷಣವನ್ನು ಪಡೆದ ಹೊಸ ವರ್ಗಕ್ಕೆ ಅಭಿವ್ಯಕ್ತಿಯ ಮಾಧ್ಯಮವಾಗಿಯೂ ಸಹಕರಿಸಿತ್ತು.

ಆಗಿನ ಕೆಲವು ಕ್ರಾಂತಿಕಾರಿ ಪತ್ರಿಕೆಗಳ ಬಗ್ಗೆ ಹಾವನೂರರು ಅಧ್ಯಯನವನ್ನು ನಡೆಸಿದ್ದಾರೆ. ಅವುಗಳಲ್ಲಿ ೧೮೮೭ರಿಂದ ಹೊರಟ 'ಹಿತಬೋಧಿನಿ' ವಿದ್ಯಾದಾಯಿನಿ

ದೇಶಾಭಿಮಾನಿ, ಸೂರ್ಯೋದಯ ಪ್ರಕಾಶಿಕೆ ಹಾಗೂ Mysore Standard ಎಂಬ ಇಂಗ್ಲಿಷ್ ಪತ್ರಿಕೆ ಮುಖ್ಯವಾದವುಗಳು.

ದೇಶಾಭಿಮಾನಿ ಪತ್ರಿಕೆಯ ರಾಜಕೀಯ ವಿದ್ಯಮಾನಗಳಿಗಾಗಿಯೇ ೧೮೯೩ರಲ್ಲಿ ಜನ್ಮತಾಳಿತು. ಅದರಲ್ಲಿ ಪ್ರಮುಖವಾಗಿ ಬರೆಯುತ್ತಿದ್ದ ಬಿ.ಸಿ.ಶ್ರೀನಿವಾಸ ಅಯ್ಯಂಗಾರ್ ಎಂಬವರು ಮಹಾರಾಜನನ್ನು ಟೀಕಿಸುತ್ತಿದ್ದು, ಇದರಿಂದ ಒಮ್ಮೆ ಅವರ ಸಮಕ್ಷಮ ಹಾಜರಾಗಿ ಸ್ಪಷ್ಟೀಕರಣ ನೀಡಲು ಅಪ್ಪಣೆಯಾಗುತ್ತದೆ, ಆದರೆ ಅಯ್ಯಂಗಾರರು ತಿರಸ್ಕರಿಸಿದಾಗ ಆ ಪತ್ರಿಕೆಗೆ ತಡೆಯಾಜ್ಞೆ ನೀಡಲಾಯಿತು. ಆಗ ಇತರ ಸಹೋದ್ಯೋಗಿ ಪತ್ರಿಕೆಗಳು, ವೃತ್ತಾಂತ ಪತ್ರಿಕೆಯಂತಹ ಮಿಶನರಿ ಪತ್ರಿಕೆ ಇದನ್ನು ಖಂಡಿಸಿತು.

ಸೂರ್ಯೋದಯ ಪ್ರಕಾಶಿಕೆಯು ದಿವಾನರ ಕಾಲದ ಆಡಳಿತ ವೈಖರಿಯನ್ನು ಕಾಲಕಾಲಕ್ಕೆ ಟೀಕಿಸಿತು. ಇಂತಹ ಟೀಕೆಗಳು ಹೆಚ್ಚಾಗುತ್ತಾ ಹೋದಂತೆ ಪತ್ರಿಕೆಯ ಮೇಲಿನ ನಿರ್ಬಂಧಗಳೂ ಹೆಚ್ಚಾಗುತ್ತಾ ಹೋದವು. ಮುಂದೆ ದಿವಾನ್ ವಿ.ಪಿ ಮಾಧವರಾಯರ ಕಾಲದಲ್ಲಿ ಅಂದರೆ ೧೯೦೮ರಲ್ಲಿ ಪತ್ರಿಕೆಯ ವಿಷಯಲ್ಲಿ ಕರಾಳ ಶಾಸನ ಜಾರಿಗೆ ಬಂತು. ಇದರ ಪ್ರಕಾರ ಸರಕಾರದ ಪೂರ್ವ ಸಮ್ಮತಿಯಿಲ್ಲದೆ ಯಾರೂ ಪತ್ರಿಕೆಯನ್ನು ಹೊರಡಿಸ ತಕ್ಕದ್ದಲ್ಲ ಹಾಗೆ ಕೊಟ್ಟ ಅನುಮತಿಯನ್ನು ಯಾವ ಕಾಲಕ್ಕೂ ಹಿಂತೆಗೆದುಕೊಳ್ಳಬಹುದು. ಸರಕಾರದ ಅನುಮತಿ ಇಲ್ಲದೆ ಪತ್ರಿಕೆಯನ್ನು ಹೊರಡಿಸಿದರೆ ಅಂತಹ ಪತ್ರಕರ್ತರ ಮೇಲೆ ಅನೇಕ ರೀತಿಯ ಶಿಕ್ಷೆಯನ್ನು ನಿಗದಿಪಡಿಸಿತು.ಇದರ ವಿರುದ್ಧ ದೇಶಾದ್ಯಂತ ವಿರೋಧ, ಪ್ರತಿಭಟನೆಗಳು ನಡೆದರೂ ಸರಕಾರ ಜಗ್ಗಲಿಲ್ಲ. ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲರಂತಹ ಪುರೋಗಾಮಿ ದಿವಾಣರ ಕಾಲದಲ್ಲೂ ಈ ಶಾಸನ ಹಾಗೆ ಮುಂದುವರಿಯಿತು. ಇದು ಪತ್ರಿಕೋದ್ಯಮದ ವಿಕಾಸದ ಮೇಲೆ ಬಲವಾದ ಪೆಟ್ಟು ಬಿದ್ದಿತು. ಮುಂದೆ ೧೯೩೯ರಲ್ಲಿ ಈ ಶಾಸನವನ್ನು ಹಿಂತೆಗೆದುಕೊಂಡಿತು.

ಧಾರಾವಾಡದ ವೃತ್ತಪತ್ರಿಕೆಗಳ ಕುರಿತು ಅಧ್ಯಯನ ಮಾಡಿದ ಹಾವನೂರರು ೧೯೭೬ರಲ್ಲಿ ಆರಂಭವಾದ 'ಚಂದ್ರೋದಯವೇ' ಧಾರವಾಡದ ಪ್ರಥಮ ವಾರ್ತಾಪತ್ರಿಕೆ ಯೆಂದು ಸಾಧಿಸಿದ್ದಾರೆ. ಆರಂಭದಲ್ಲಿ ದೇಶೀಯ ಪತ್ರಿಕೆಗಳಲ್ಲಿ ಬಂದ ಸರಕಾರಿ ಟೀಕೆ ಅಥವಾ ಮೆಚ್ಚುನುಡಿಗಳನ್ನು ವರದಿಮಾಡಲು ನಿಯುಕ್ತವಾದ Report on native press ಎಂಬ ಮುಂಬಯಿ ಸರಕಾರದ ದಾಖಲೆಗಳನ್ನು ಇದಕ್ಕೆ ಆಧಾರವಾಗಿ ಬಳಸಿದ್ದರು. ಈಗ ಆ ಪತ್ರಿಕೆಯ ಮೂರು ಸಂಚಿಕೆಗಳು ಸಂಯುಕ್ತ ಕರ್ನಾಟಕದ ಎನ್.ಎಸ್ ಘಳಗಿಯವರಿಗೆ ದೊರೆತಿದ್ದು ಸೂಕ್ತವಾದ ಸಾಕ್ಷಿ ಒದಗಿದಂತಾಗಿದೆ. ಇದಕ್ಕಿಂತ ಮೊದಲು ಅಲ್ಲಿ 'ಬೆಳಗಾವಿ ಸಮಾಚಾರ', 'ಧಾರವಾಡ ವೃತ್ತ', 'ಹುಬ್ಬಳೀ ವೃತ್ತ' ಮುಂತಾದ ಪತ್ರಿಕೆಗಳಿದ್ದರೂ ಅವೆಲ್ಲ ಮರಾಠಿಯವುಗಳಾಗಿದ್ದವು. ಚಂದ್ರೋದಯ ಪತ್ರಿಕೆಯು ಯುರೋಪಿಯನ್ ಸರಕಾರದ ವಿರುದ್ಧ ಅತ್ಯಂತ ಧೈರ್ಯದಿಂದಲೇ ಟೀಕಾ ಪ್ರಹಾರಗೈದು ಪತ್ರಿಕಾಧರ್ಮವನ್ನು ಮೆರೆದಿತ್ತು. ಅದರ ಸಂಪಾದಕರು ಹುಚ್ಚಯ್ಯ ವಿಭೂತಿ ಮಠ ಆಗಿದ್ದರು. ಚಂದ್ರೋದಯ ಪತ್ರಿಕೆಯು ರಾಷ್ಟ್ರೀಯ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ ಮತ್ತು ಸ್ವಂತಿಕೆಯನ್ನು ಮೆರೆದ ಪತ್ರಿಕೆ ಎಂಬುದನ್ನು ಹಾವನೂರರು ಕಂಡುಕೊಂಡಿದ್ದಾರೆ. ಆ ಕಾಲದ ಇನ್ನು ಕೆಲವು ಪತ್ರಿಕೆಗಳ ಬಗ್ಗೆ

ಹಾವನೂರರು ನಡೆಸಿದ ಅಧ್ಯಯನದ ಸಾರ ಹೀಗಿದೆ. ಸಾಮಾನ್ಯ ಜನತೆಯ ಬಗ್ಗೆ ಚಂದ್ರೋದಯ ಪತ್ರಿಕೆ ತೋರಿದ ಕಾಳಜಿಯನ್ನೇ ತೋರಿಸಿದ ಇನ್ನೊಂದು ಪತ್ರಿಕೆ ತಾತ ವೆಂಕಟಕೃಷ್ಣಪ್ಪಯ್ಯನವರ 'ವೃತ್ತಾಂತ ಚಿಂತಾಮಣಿ' ಎಂದು ಹಾವನೂರರ ಅಭಿಮತ. ಹಿಂದೂ ಮತಾಂತರದ ವಿರುದ್ಧ ಜನರನ್ನು ಎಚ್ಚಿಸಲು ಕ್ರೈಸ್ತರ ಹಿಂದೂ ಮತದ ವಿರುದ್ಧ ಪ್ರಚಾರಕ್ಕೆ ಉತ್ತರವನ್ನು ನೀಡುವುದಕ್ಕಾಗಿಯೇ ಸಂಪಾದಕ ಸರಸ್ವತಿಯವರು 'ಹಿಂದೂ ಮತಾಭಿಮಾನಿ' ಎಂಬ ಪತ್ರಿಕೆಯನ್ನು ಆರಂಭಿಸಿದ್ದರು.

೧೯೦೬ ಸಪ್ಟೆಂಬರ್ ತಿಂಗಳಿನಿಂದ ಆರಂಭವಾದ 'ಧನುರ್ಧಾರಿ' ಎಂಬ ಪತ್ರಿಕೆಯು ಮರಾಠಿ ಪತ್ರಿಕೆಯಿಂದ ಪ್ರಯೋಜನ ಪಡೆದು ರೂಪುಗೊಂಡಿದೆ. ಈ ಪತ್ರಿಕೆಯ ಸಂಪಾದಕರು ಗಾಂಧೀಜಿಯ ಸ್ವದೇಶಿ ವ್ರತವನ್ನು ಕಟ್ಟುನಿಟ್ಟಾಗಿ ಆಚರಿಸಿದ, ದೇಶ ಸೇವೆಗಾಗಿಯೇ ತನ್ನನ್ನು ತಾನು ಮುಡಿಪಾಗಿಟ್ಟ ಹರ್ಡೇಕರ್ ಮಂಜಪ್ಪನವರು. ಕಾಳ, ಕೇಸರಿ, ಮುಂತಾದ ಮರಾಠಿ ಪತ್ರಿಕೆಗಳಲ್ಲಿ ಬರುತ್ತಿದ್ದ ರಾಷ್ಟ್ರೀಯತೆಯ ವಿಚಾರಧಾರೆಗಳಿಂದ ಈ ಪತ್ರಿಕೆ ಪ್ರಭಾವಿತಗೊಂಡಿತ್ತು.

ಕನ್ನಡ ಪತ್ರಿಕೋದ್ಯಮದ ದ್ವಿತೀಯ ಘಟ್ಟ ೧೯೨೦ರಿಂದ ಆರಂಭವಾಗುತ್ತದೆ. ಮುಖ್ಯವಾಗಿ ಇಲ್ಲಿ ದೇಶವು ಪಾರತಂತ್ರ್ಯದಿಂದ ಮುಕ್ತವಾಗಬೇಕು. ನಮ್ಮದೇ ಸ್ವತಂತ್ರ ಸ್ವರಾಜ್ಯವಿರಬೇಕು ಎಂಬ ನೇರ ಗುರಿ ನಿಚ್ಚಳವಾಗಿತ್ತು. ಗಾಂಧೀಯುಗದ ಪ್ರಭಾವವೇ ಅಲ್ಲಿ ವ್ಯಕ್ತವಾಗಿದೆ. ಸತ್ಯಾಗ್ರಹಿಗಳು ಕ್ರಾಂತಿಕಾರರ ಚಟುವಟಿಕೆಗಳು, ಕಾಂಗ್ರೆಸ್ ಅಧಿವೇಶನದ ಕಾರ್ಯಕಲಾಪಗಳು, ಅಸಹಕಾರ ಚಳುವಳಿ, ಬಂಧನ, ಜೈಲು ಮುಂತಾದ ವಿಷಯಗಳು ಪತ್ರಿಕೆಗಳಲ್ಲಿ ಹೆಚ್ಚಾಗಿ ಮೂಡಿಬರುತ್ತಿತ್ತು ಎಂಬುದಾಗಿ ಹಾವನೂರರು ಹೇಳಿದ್ದಾರೆ.

ಈ ಕಾಲದ ಪತ್ರಿಕೆಯ ಇತಿಹಾಸದ ಅಧ್ಯಯನ ಸಾರವನ್ನು ಈ ರೀತಿಯಾಗಿ ನೀಡಬಹುದು. ಮದ್ರಾಸಿನಲ್ಲಿ ದಿ. ೧೨.೮.೧೯೨೦ರಂದು ನಡೆದ ಗಾಂಧೀಜಿಯವರ ಭಾಷಣದಿಂದ ಪ್ರಭಾವಿತರಾಗಿ ತಿ.ತಾ ಶರ್ಮ ರಾಷ್ಟ್ರಸೇವೆಗೆ ಧುಮುಕಲು ನಿರ್ಧರಿಸಿ ನೌಕರಿಯ್ನು ಬಿಟ್ಟು 'ಮೈಸೂರು ಸ್ಟಾರ್' ಎಂಬ ಕನ್ನಡ ಪತ್ರಿಕೆಯನ್ನು ಸೇರಿಕೊಂಡರು. ಮುಂದೆ ೪೦೦ ರೂಪಾಯಿ ಸಾಲ ಮಾಡಿಕೊಂಡು 'ವಿಶ್ವಕರ್ನಾಟಕ' ಎಂಬ ಪತ್ರಿಕೆಯನ್ನು ಆರಂಭಿಸಿದರು, ಅದೇ ರೀತಿಯಲ್ಲಿ ಇಡೀ ಸಂಚಿಕೆಯು ಕವಿತಾ ರೂಪದಲ್ಲಿ ಮೂಡಿಬಂದದ್ದು ೧೯೧೮ರ ಮಧ್ಯದಿಂದ ಆರಂಭವಾದ ಪ್ರಭಾತದಲ್ಲಿ ಈ ಪ್ರಯೋಗವನ್ನು ಮಾಡಿದವರು ಧಾರವಾಡದ ವೈ.ಬಿ. ಜಠಾರರು.

ಗಾಂಧೀಯುಗದ ಕಹಳೆಯನ್ನು ಕರ್ನಾಟಕಸ್ತರು ಬಡಿದೇಳುವಂತೆ ಊದುವ ಉದ್ದೇಶದಿಂದಲೇ ೧೯೨೦ರಲ್ಲಿ ಹುಬ್ಬಳ್ಳಿಯಲ್ಲಿ ಪ್ರಾರಂಭವಾದ ಪತ್ರಿಕೆ 'ಕರ್ಮವೀರ'. ರಂ.ರಾ. ದಿವಾಕರರು ಅದರ ಪ್ರತೋದಕರು. ಪತ್ರಿಕೆಗೆ ಯಾವುದೇ ರೀತಿಯ ಕಷ್ಟಗಳು ಬಂದೊದಗಿದಾಗ ಧಾರವಾಡದ ಸಾಹಿತಿಕರು ಬೆನ್ನೆಲುಬಾಗಿ ನಿಂತಿದ್ದರು. ೧೯೨೧ರ ಅಸಹಕಾರ ಚಳುವಳಿಗೆ ಮಾಡಿದ ಗೋಲಿಬಾರ್‌ನ ದುರಂತವನ್ನು ವಿವರವಾಗಿ ವರದಿ ಮಾಡಿದ್ದರಿಂದ ಸಂಪಾದಕರನ್ನು ಬಂಧಿಸಲಾಯಿತು. ಆಗ ಹುಕ್ಕೇರಿಕರ ರಾಮರಾಯರು ಪತ್ರಿಕೆಯನ್ನು ನೋಡಿಕೊಂಡಿದ್ದರು. ಅಲ್ಲದೆ ಆಲೂರು ವೆಂಕಟರಾಯರು ಮತ್ತು ಶಂ.ಬಾ. ಜೋಶಿಯವರು ಹೆಸರು ಕೊಡದೇ ಲೇಖನ ಸಂಪಾದನ ಕಾರ್ಯದಲ್ಲಿ ಜತೆಗೂಡಿದ್ದರು.

ಪುತ್ತೂರಿನಲ್ಲಿ ನಾಲ್ಕು ಜನ ಸಂಪಾದಕರು ಜೊತೆ ಸೇರಿ 'ಸಹಕಾರಿ' ಎಂಬ ಪತ್ರಿಕೆಯನ್ನು ಆ ಕಾಲದಲ್ಲಿ ನಡೆಸುತ್ತಿದ್ದುದನ್ನು ಡಾ। ಹಾವನೂರರು ಗುರುತಿಸಿದ್ದಾರೆ, ಧಾರವಾಡದ ಕಡೆಯಿಂದ ವಿ.ಎನ್ ಜೋಗಿ ಮತ್ತು ಕೆ.ಬಿ. ಅಂಕಲಗಿಯವರು, ಪುತ್ತೂರಿನಿಂದ ಮೊಳಹಳ್ಳಿ ಶಿವರಾಯರು ಮತ್ತು ಮಂಜೇಶ್ವರ ಅನಂತರಾಯರು ಇದರ ಸಂಪಾದಕರಾಗಿದ್ದರು.ಮುಂದೆ ಅನಂತರಾಯರ ಜಾಗದಲ್ಲಿ ಉಳ್ಳಾಲ ಮಂಗೇಶರಾಯರು, ೧೯೩೯ರಿಂದ ರಾಮರಾಯಮಲ್ಯರು ಸಂಪದಾಕರಾಗಿ ಸೇರಿಕೊಂಡರು.

ಸ್ವಾತಂತ್ರ್ಯಪೂರ್ವದ ಪತ್ರಿಕೆಗಳು ಸಮೀಕ್ಷೆಗೆ ಸುಲಭವಾಗಿ ಒಳಪಡುವಂತಹ ವಾಗಿದ್ದವು. ಆ ಅವಧಿಯ ಪತ್ರಿಕೆಗಳ ಸಂಖ್ಯೆಯೇ ಅಳಿವಿನಲ್ಲಿದ್ದಿತು. ಹಾಗೂ ಪತ್ರಿಕೆಗಳನ್ನು ಹೊರಡಿಸುವಾಗಿನ ಉದ್ದೇಶವು ವಾರ್ತಿಕ, ವೈಚಾರಿಕ ಇಲ್ಲವೆ ಮನೋರಂಜಕ ಎಂಬುದು ಸ್ಪಷ್ಟವಾಗಿ ತಿಳಿಯಬರುವಂತಿತ್ತು. ಮಾತ್ರವಲ್ಲದೆ ದೇಶದ ಸ್ವಾತಂತ್ರ್ಯ ಹೋರಾಟದಲ್ಲಿಯೇ ಅನೇಕ ಪತ್ರಕರ್ತರ ದೃಷ್ಟಿ ಕೇಂದ್ರೀಕೃತವಾಗಿದ್ದು, ಸ್ವಾತಂತ್ರ್ಯದೊರೆತ ಮೇಲೆ ಅವರ ಗುರಿ ಕರ್ನಾಟಕ ಏಕೀಕರಣ ಚಳುವಳಿಯತ್ತ ತಿರುಗಿತು. ಪತ್ರಿಕೆಯ ಸ್ವರೂಪ ಏನೇ ಇದ್ದರೂ, ರಾಜಕೀಯ ಒಲವು ಎಂಥದೇ ಇದ್ದರೂ ನಮ್ಮ ಪತ್ರಿಕೆಗಳು ನಿರ್ವ್ಯಾಜವಾಗಿ ನಾಡಿನ ಏಕೀಕರಣ ಚಳುವಳಿಯಲ್ಲಿ ಪಾಲ್ಗೊಂಡಿವೆ ಎಂದು ಹಾವನೂರರು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

ತೃತೀಯ ಘಟ್ಟ ೧೯೪೭ರ ಅನಂತರದ ಸ್ವಾತಂತ್ರ್ಯೋತ್ತರದ ಕಾಲವಾಗಿದ್ದು ಪತ್ರಿಕೋದ್ಯಮ ದೆಸೆ ಸಾಕಷ್ಟು ಬದಲಾಯಿತು ಎಂದು ಹೇಳುವ ಹಾವನೂರರು ಈ ಕಾಲದಲ್ಲಿ ಸೇವಾ ಮನೋಭಾವವು ದೂರವಾಯಿತು. ಪತ್ರಿಕೋದ್ಯಮವು ಸಂಸ್ಥೆಯ ಸ್ವರೂಪವನ್ನು ಪಡೆಯಿತು. ಪತ್ರಿಕಾಲಯವು ಸುದ್ದಿವಿಭಾಗ, ಜಾಹೀರಾತು ವಿಭಾಗ, ಕಲಾವಿಭಾಗ, ಮುಂತಾದ ಉಪವಿಭಾಗಗಳಾಗಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತು. ದಿನ ಹಾಗೂ ವಾರಪತ್ರಿಕೆಗಳ ಸಂಖ್ಯೆ ಗಣನೀಯವಾಗಿ ಹೆಚ್ಚಳವನ್ನು ಕಂಡಿತು. ಒಂದು ಸಂಸ್ಥೆ ಹಲವು ಪತ್ರಿಕೆಗಳನ್ನು ಹೊರತರಲಾರಂಬಿಸಿದವು. ವಿಶ್ವ ವಿದ್ಯಾನಿಲಯಗಳು ಪತ್ರಿಕೋದ್ಯಮ ತರಬೇತಿಯನ್ನು ನೀಡುವುದಕ್ಕೆ ಆರಂಭಿಸಿದುವು. ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್, ಸುಧಾ, ಮಯೂರ, ನವಯುಗ, ವಿಶಾಲ ಕರ್ನಾಟಕ, ವಿಶ್ವವಾಣಿ, ಸಂಯುಕ್ತ ಕರ್ನಾಟಕ, ನವಭಾರತ ಮುಂತಾದವು ಈ ಕಾಲದ ಪ್ರಮುಖ ಪತ್ರಿಕೆಗಳು.

### ಹಾವನೂರರು ಕಂಡುಕೊಂಡ ಅನ್ಯಭಾಷಾ ಪತ್ರಿಕೆಗಳು

ಕನ್ನಡ ನಾಡಿನಲ್ಲಿ ಸ್ವಾತಂತ್ರ್ಯ ಪೂರ್ವದಿಂದ ಸ್ವಾತಂತ್ರ್ಯೋತ್ತರ ಕಾಲದವರೆಗೂ ಪ್ರಕಟವಾದ ಅನ್ಯಭಾಷಾ ಪತ್ರಿಕೆಗಳನ್ನು ಗುರುತಿಸಿ ಅವುಗಳ ಪರಿಚಯವನ್ನು ಹಾವನೂರರು ನೀಡಿದ್ದಾರೆ.

೧೮೬೩ರಲ್ಲಿ ಮೊದಲ ಬಾರಿಗೆ ನಾಡಿನ ಪೂರ್ವ ದಿಕ್ಕಿನಲ್ಲಿ 'ಕಾಸೀಮ್-ಅಲ್-ಅಕಬರ್' ಎಂಬ ಹಿಂದೂಸ್ಥಾನಿ ಭಾಷೆಯ ಪತ್ರಿಕೆ ಕಂಡುಬಂದಿತು. ಅದು ಸುಮಾರು ಮೂವತ್ತು ವರ್ಷಗಳ ವರೆಗೆ ಬದುಕಿದ್ದಿತು. ಈ ಪತ್ರಿಕೆಯು ಮುಸ್ಲಿಂ ಮಹಿಳೆಯರ ಶೈಕ್ಷಣಿಕ

ಉನ್ನತಿಯ ಬಗ್ಗೆ ಆಸ್ಥೆ ವಹಿಸಿತ್ತು. ೧೯೧೩ರಲ್ಲಿ ಕೌಲ-ಎ. ಮೈಸೂರು ಎಂಬ ಉರ್ದು ಪತ್ರಿಕೆಯು ಆರಂಭವಾಗಿತ್ತು. ೧೯೨೪ರಲ್ಲಿ ಕೋಲಾರದಲ್ಲಿ 'ತಮಿಳಿಯನ್' ಎಂಬ ತಮಿಳು ಪತ್ರಿಕೆ ಪ್ರಕಟವಾಗಿತ್ತು.

ಉತ್ತರ ಕರ್ನಾಟಕದಲ್ಲಿ ಹಾವಳಿಯ ರೀತಿಯಲ್ಲಿ ಮರಾಠಿ ಪತ್ರಿಕೆಗಳು ಹೊರಬರುತ್ತಿದ್ದವು. ಕಲಾದಗಿಯ ಹಿತೇಚ್ಛು, ಧಾರವಾಡದ 'ಭಾವ' ಮುಂತಾದವುಗಳನ್ನು ಗುರುತಿಸಬಹುದು. ಉತ್ತರ ಕರ್ನಾಟಕದ ವಿವಿಧ ಊರುಗಳಲ್ಲಿ ೧೮೮೦ರಿಂದ ೧೯೪೭ರ ಅವಧಿಯಲ್ಲಿ ೬೦ ಕ್ಕೂ ಮಿಕ್ಕಿ ಮರಾಠಿ ಪತ್ರಿಕೆಗಳು ಜನ್ಮ ತಾಳಿದವು. ಬೆಳಗಾವಿಯಲ್ಲಿದ್ದ 'ಬೆಳಗಾವಿ ಸಮಾಚಾರ'ವು ದೀರ್ಘಕಾಲೀನ ಪತ್ರಿಕೆಯಾಗಿದ್ದು ಬೆಳಗಾವಿಯನ್ನು ಮಹಾರಾಷ್ಟ್ರಕ್ಕೆ ಸೇರಿಸುವ ಹುನ್ನಾರ ಈ ಪತ್ರಿಕೆಯದ್ದು ಎಂಬುದು ಹಾವನೂರರ ಅಭಿಪ್ರಾಯ.

**ಕನ್ನಡದ ಮೊದಲ ಪತ್ರಿಕೆ, 'ಮಂಗಳೂರು ಸಮಾಚಾರ'**

ಕನ್ನಡ ಪತ್ರಿಕೋದ್ಯಮದ ಇತಿಹಾಸವನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ, ಕನ್ನಡದ ಪ್ರಥಮ ಪತ್ರಿಕೆ ಯಾವುದು ಎಂಬ ಪ್ರಶ್ನೆಗೆ ಹಾವನೂರರು ಉತ್ತರವನ್ನು ಕಂಡುಕೊಂಡ ಬಗೆ ಹೀಗಿದೆ.

'ಭಾರತೀಯ ಪತ್ರಿಕೋದ್ಯಮ' ಕುರಿತಾದ ಮಹಾ ಪ್ರಬಂಧದಲ್ಲಿ ಬಳ್ಳಾರಿಯ ಜರ್ಮನ್ ಪಾದ್ರಿಗಳು 'ಕನ್ನಡ ಸಮಾಚಾರ'ವೆಂಬ ಕನ್ನಡ ಪತ್ರಿಕೆಯನ್ನು ೧೮೧೨ನೆಯ ಇಸವಿಯಲ್ಲಿ ಧರ್ಮ ಪ್ರಚಾರಕ್ಕೋಸ್ಕರ ಪ್ರಕಟಿಸಿದರು ಎಂದು ಹೇಳಲಾಗಿದೆ. ಆ ಪ್ರಬಂಧಕಾರರು ಮುಂದುವರಿದು 'ಬಳ್ಳಾರಿಯ ಕನ್ನಡ ಸಮಾಚಾರವೇ' ಕನ್ನಡದ ಪ್ರಥಮ ಪತ್ರಿಕೆಯೆಂದು ಘಂಟಾಘೋಷವಾಗಿ ಹೇಳಬಹುದು. ೧೮೪೨ರಲ್ಲಿ ಮಂಗಳೂರಿನ ಬಾಸೆಲ್ ಮಿಷನ್ ಪ್ರೆಸ್ಸಿನಲ್ಲಿ ಈ ಪತ್ರಿಕೆಯನ್ನು ಅಚ್ಚುಮಾಡಿದರೂ ಅದರ ಹೆಸರನ್ನು 'ಕನ್ನಡ ಸಮಾಚಾರ' ವೆಂದೇ ಮುಂದುವರಿಸಿದರು. ಕೆಲವು ಕಾಲಾನಂತರ ಆ ಹೆಸರನ್ನು ಮಂಗಳೂರ ಸಮಾಚಾರ ಕನ್ನಡ ಸುವಾರ್ತಿಕ ಎಂದು ಕ್ರಮವಾಗಿ ಬದಲಾಯಿಸಲಾಯಿತು ಎಂದು ಹೇಳಿದ್ದಾರೆ. ಈ ಅಭಿಪ್ರಾಯ ಮುಂದೆ ಎಲ್ಲಾ ಕಡೆ ಸ್ವೀಕೃತವಾಗತೊಡಗಿತು.

ಡಾ। ಹಾವನೂರರು ಈ ವಿಚಾರವನ್ನು ಒಪ್ಪುವುದಕ್ಕೆ ಸಿದ್ಧರಿರಲಿಲ್ಲ. ಬಳ್ಳಾರಿಯಲ್ಲಿ ಜರ್ಮನ್ ಮಿಶನರಿಗಳು ನೆಲೆಸಲೇ ಇಲ್ಲ. ಮಂಗಳೂರು ಅವರ ಮೊದಲ ನೆಲೆಯಾಗಿದ್ದಿತು. ಬಳ್ಳಾರಿಯಲ್ಲಿ ನೆಲೆನಿಂತವರು ಲಂಡನ್ ಮಿಶನ್ನಿನವರು ಎಂಬ ಸತ್ಯವನ್ನು ಹಾವನೂರರು ದಾಖಲೆ ಸಹಿತ ತೋರಿಸಿಕೊಟ್ಟಿದ್ದಾರೆ. ಆದ್ದರಿಂದ ಈ ಪತ್ರಿಕೆಯು ಬಳ್ಳಾರಿಯಿಂದ ಆರಂಭವಾಗುವುದು ಸಾಧ್ಯವೇ ಇಲ್ಲ ಎಂಬುದು ಹಾವನೂರರ ಬಲವಾದ ನಂಬಿಕೆ. ಈ ಹಿನ್ನೆಲೆಯಲ್ಲಿ ಸಂಶೋಧನಾ ನಿರತರಾದ ಹಾವನೂರರಿಗೆ ಯುರೋಪಿನ ಪ್ರಾಚ್ಯ ಪುಸ್ತಕಾಲಯದಲ್ಲಿ ಈ ಪತ್ರಿಕೆಯ ಪ್ರತಿಗಳು ದೊರಕಿದವು. ಅದರ ಸಂಪೂರ್ಣ ಸಂಪುಟದ ಮೈಕ್ರೋ ಫಿಲ್ಮನ್ನು ಇಂಗ್ಲೆಂಡ್‌ನಿಂದ ತರಿಸಿಕೊಂಡು ಅಧ್ಯಯನ ನಡೆಸಿದಾಗ ಅದರ ಮೊದಲ ಸಂಚಿಕೆಯಿಂದ, ಆ ಪತ್ರಿಕೆಯು ೧೮೪೩ರಲ್ಲಿ ಆರಂಭವಾದ ವಿಷಯ ಮತ್ತು ಅದರ ಕೊನೆಯ ಸಂಚಿಕೆಯಿಂದ ಅದು 'ಕಂನಡ ಸಮಾಚಾರ' ಎಂಬ ಹೆಸರನ್ನು ತಳೆದು

೧೮೪೪ರಿಂದ ಬಳ್ಳಾರಿಯಿಂದ ಹೊರಡತೊಡಗಿದ್ದ ವಿಷಯ ನಿಚ್ಚಳವಾಯಿತು.

ಈ ಪತ್ರಿಕೆಯ ಅಧ್ಯಯನದಿಂದ ಕಂಡುಕೊಂಡ ವಿಷಯಗಳೆಂದರೆ, ಇದು ೧೮೪೩ರಲ್ಲಿ ಜರ್ಮನ್‌ನ ಇವ್ಯಾಂಜೆಲಿಕಲ್ (ಬಾಸೆಲ್) ಮಿಶನ್‌ನವರಿಂದ ಪ್ರಾರಂಭವಾಗಿದ್ದು ಇದರ ಸಂಪಾದಕ ಹರ್ಮನ್ ಮೊಗ್ಲಿಂಗ್ ಇದರ ಪ್ರಕಟನೆಗೆ ಮುಖ್ಯ ಕಾರಣ ಜನರ ಅಜ್ಞಾನವನ್ನು ದೂರಮಾಡುವುದು, ಪ್ರಪಂಚದ ಜ್ಞಾನವನ್ನು ಜನರಿಗೆ ದೊರಕಿಸುವುದು, ಗಾಳಿ ಮಾತಿನಿಂದ ಮೋಸ ಹೋಗುವ ಜನರಿಗೆ ಸತ್ಯ ವಿಷಯವನ್ನು ತಿಳಿಸುವುದು. ಬಾಸೆಲ್ ಮಿಶನ್‌ನವರು ಈ ಪತ್ರಿಕೆಯನ್ನು ಮತ ಪ್ರಚಾರಕ್ಕೆ ಬಳಸದೆ 'ಜಾತ್ಯತೀತ' ಪತ್ರಿಕೆಯನ್ನಾಗಿಸಿದ್ದು ಮೆಚ್ಚತಕ್ಕ ಅಂಶ. ಹಾವನೂರರು ಇದನ್ನು ವಿಶೇಷವಾಗಿ ಗಮನಿಸಿದ್ದಾರೆ.

ಹೀಗೆ ೧೮೪೩ರಿಂದ ಮಂಗಳೂರು ಸಮಾಚಾರದೊಂದಿಗೆ ಆರಂಭವಾದ ಕನ್ನಡ ಪತ್ರಿಕೋದ್ಯಮದ ಇತಿಹಾಸ ಅನೇಕ ಎಡರು ತೊಡರುಗಳನ್ನು ದಾಟಿ ಪ್ರವರ್ಧಮಾನಕ್ಕೆ ಬಂದ ಇತಿಹಾಸವನ್ನು ಡಾ. ಹಾವನೂರರು ಸೋದಾಹರಣವಾಗಿ ವಿವರಿಸಿದ್ದಾರೆ.

## ಕ್ರೈಸ್ತ ಸಾಹಿತ್ಯ

ಡಾ। ಶ್ರೀನಿವಾಸ ಹಾವನೂರರು ತಮ್ಮ ಸಂಶೋಧನಾ ಪ್ರಬಂಧ 'ಹೊಸಗನ್ನಡದ ಅರುಣೋದಯ'ಕ್ಕಾಗಿ ಹತ್ತೊಂಬತ್ತನೆಯ ಶತಮಾನದ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಅಧ್ಯಯನ ಮಾಡುವಾಗ ಆ ಕಾಲದ ಸಾಹಿತ್ಯರಥವನ್ನು ಪ್ರಮುಖವಾಗಿ ಮುನ್ನಡೆಸಿದವರು ಮಿಶನರಿಗಳು, ಬ್ರಿಟಿಷ್ ಅಧಿಕಾರಿಗಳು ಎಂಬ ಸತ್ಯವನ್ನು ಮನಗಂಡರು. ಇದನ್ನು ಬೆನ್ನು ಹತ್ತಿದ ಹಾವನೂರರು ಬಾಸೆಲ್ ಮಿಷನ್, ಮೆಥಾಡಿಸ್ಟ್, ಲಂಡನ್ ಮಿಷನ್, ಜೆಸ್ಯುಯಿಟ್ ಮುಂತಾದ ಕ್ರೈಸ್ತ ಸಂಸ್ಥೆಗಳು, ಸಿನ್ನಾಮಿ, ಜಾನ್‌ಹ್ಯಾಂಡ್, ರೀವ್, ಬಿ.ಎಲ್.ರೈಸ್, ಮೆಕೆಂಝಿ, ಬಿಕನೆನ್, ಲೂಯಿರೈಸ್‌ರಂತಹ ವಿದ್ವಾಂಸರುಗಳು ನೀಡಿದ ಕೊಡುಗೆಗಳನ್ನು ದಾಖಲೆ ಸಹಿತವಾಗಿ ಒದಗಿಸಿಕೊಟ್ಟಿದ್ದಾರೆ. ಇಲ್ಲಿ ಹಾವನೂರರು ಕ್ರೈಸ್ತ ಸಾಹಿತ್ಯದ ಕುರಿತು ನಡೆಸಿದ ಸಂಶೋಧನೆಯ ಸಾರವನ್ನು ನೀಡಲಾಗಿದೆ.

ಮಿಶನರಿಯವರ ಆಗಮನದ ಹಿನ್ನೆಲೆ ಕ್ರೈಸ್ತಮತ ಪ್ರಸಾರವಾಗಿತ್ತಾದರೂ ಅದನ್ನು ನೇರವಾಗಿ ಮಾಡುವುದು ಕಷ್ಟಸಾಧ್ಯವೇ ಆಗಿತ್ತು. ಶಿಕ್ಷಣದ ಮೂಲಕ ಜನರನ್ನು ಹತ್ತಿರಕ್ಕೆ ತಂದು ಅನಂತರ ಕ್ರೈಸ್ತ ವಿಚಾರವನ್ನು ಅವರಿಗೆ ಮನದಟ್ಟಾಗುವ ಹಾಗೆ ಮುಟ್ಟಿಸಬಹುದು ಎಂದು ಯೋಚಿಸಿದರು. ಅಲ್ಲದೆ ಆ ಕಾಲದಲ್ಲಿ ಇಂಗ್ಲಿಷ್ ಕಲಿಯುವಿಕೆಯು ಪ್ರಾಧಾನ್ಯವನ್ನು ಗಳಿಸಿಕೊಂಡದ್ದು ಈ ಉದ್ದೇಶಕ್ಕೆ ವರದಾನವೇ ಆಗಿತ್ತು. ಈ ಸಂದರ್ಭದಲ್ಲಿ ಅವರಿಗೆ ಅನಿವಾರ್ಯವಾಗಿ ಬೇಕಿದ್ದ ಪರಿಕರಗಳು ಪಠ್ಯ ಪುಸ್ತಕ, ಬೈಬಲ್‌ನಂತಹ ಕನ್ನಡ ಅನುವಾದಿತ ಧರ್ಮಗ್ರಂಥಗಳು ಮತ್ತು ಅವುಗಳ ಸಾವಿರಾರರು ಪ್ರತಿಗಳು. ಈ ನಾಡಿಗೆ ಬಂದ ಮಿಶನರಿಗಳು ಕನ್ನಡವನ್ನು ಕಲಿತರು, ಬೈಬಲ್ ಮತ್ತಿತರ ಮತೀಯ ಕೃತಿಗಳನ್ನು ಅನುವಾದ ಮಾಡಿದರು. ಕನ್ನಡ ಶಬ್ಧಕೋಶ ವ್ಯಾಕರಣಗಳನ್ನು ರಚಿಸಿದರು. ಪಠ್ಯಪುಸ್ತಕಗಳನ್ನು

ಪ್ರಕಟಿಸಿದರು. ಇದಕ್ಕಾಗಿ ತಂದ ಮುದ್ರಣಯಂತ್ರ ಸಾಹಿತ್ಯದ ಬೆಳವಣಿಗೆಯ ಇತಿಹಾಸದಲ್ಲಿ ಹೊಸ ಶಕೆಯನ್ನು ಮೂಡಿಸಿತು.

ಮಿಶನರಿಗಳು ಹೊಸಗನ್ನಡ ಸಾಹಿತ್ಯ ನಿರ್ಮಿತಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು. ಅವರ ಯಾವುದೇ ಸಾಹಿತ್ಯಿಕ ಚಟುವಟಿಕೆಗಳಿಗೆ ಕ್ರೈಸ್ತ ಮತವೇ ಪ್ರೇರಕವಾಗಿದ್ದರೂ ಸಾಕಷ್ಟು ಬಾರಿ ಅವರು ಗ್ರಂಥರಚನೆ ಮಾಡುವಾಗ ಮತೀಯ ದೃಷ್ಟಿಯು ಹಿಂದುಳಿದು ಅದು ಸರ್ವಜನ ಗ್ರಾಹ್ಯವಾದದ್ದಿದೆ.

ಮುದ್ರಣಯಂತ್ರ ೧೫೫೬ರಲ್ಲಿ ಪ್ರಪ್ರಥಮ ಬಾರಿಗೆ ಗೋವೆಯಲ್ಲಿ ಸ್ಥಾಪಿತವಾದರೂ ಕನ್ನಡಕ್ಕೆ ಸಂಬಂಧಿಸಿದ ಕೃತಿ ರಚನೆಯಾದದ್ದು ೧೯ನೇ ಶತಮಾನದಲ್ಲಿ ವಿಲಿಯಂ ಕೇರಿ ಎಂಬ ಪ್ರೊಟೆಸ್ಟಂಟ್ ಮಿಶನರಿಯು ಬಂಗಾಲದ ಶ್ರೀರಾಮ ಪುರದಲ್ಲಿ ಹೊರತಂದ "A grammer of the Karnata Languange" ಗ್ರಂಥದ ಮೂಲಕ. ಮುಂದೆ ಸಾಹಿತ್ಯ ಕೃತಿ ರಚನೆ ಅತ್ಯಂತ ವೇಗವಾಗಿ ಸಾಗಿತು. ಈ ಹಿಂದೆ ಕವಿತೆಯೊಂದೇ ಸಾಹಿತ್ಯಾಭಿವ್ಯಕ್ತಿಗೆ ಮಾಧ್ಯಮವಾಗಿದ್ದದ್ದು ಈಗ ಗದ್ಯ ರಚನೆಯ ಕಡೆಗೆ ಹೆಚ್ಚಿನ ಆಸಕ್ತಿ ಮೂಡಿತು.

ಡಾ। ಹಾವನೂರರ ಅಧ್ಯಯನದ ಪ್ರಕಾರ ಕ್ರೈಸ್ತ ಸಾಹಿತ್ಯ ಕಾರ್ಯವೂ ಸುಮಾರು ಕ್ರಿ.ಶ ೧೬೫೦ರಿಂದ ೧೯೧೫ರ ವರೆಗೆ ನಡೆದುಕೊಂಡು ಬಂದಿದ್ದು, ಇದನ್ನು ಮುದ್ರಣ ಪೂರ್ವಯುಗ ೧೬೫೦ರಿಂದ ೧೮೧೫ ಮತ್ತು ಮುದ್ರಣಯುಗ ೧೮೧೫-೧೯೧೫ ಎಂದು ವಿಭಾಗಿಸಬಹುದು. ಮುದ್ರಣ ಪೂರ್ವಯುಗದಲ್ಲಿ ಕೇವಲ ಕೆಥಲಿಕರ ಸಾಹಿತ್ಯ ಹಸ್ತಪ್ರತಿಯ ರೂಪದಲ್ಲಿ ದೊರಕಿರುತ್ತದೆ. ದ್ವಿತೀಯ ಘಟ್ಟದಲ್ಲಿ ಪ್ರೊಟೆಸ್ಟಂಟರ ಕೃತಿಗಳೇ ಹೆಚ್ಚಾಗಿ ದೊರಕುತ್ತದೆ. ೧೯ನೇ ಶತಮಾನಕ್ಕಿಂತ ಹಿಂದೆ ಮತೀಯ ಪುಸ್ತಕಗಳೇ ಹೆಚ್ಚಾಗಿ ರಚಿತವಾಗಿದ್ದರೆ ಅನಂತರ ಮತೀಯ ಪುಸ್ತಕಗಳ ಜೊತೆಗೆ ಇತರ ಪುಸ್ತಕಗಳು ರಚಿತವಾಗಿದೆ.

ಲಿಯೋನಾರ್ಡೊ ಚಿನಾಮಿ ಅಥವಾ ಚಿನಾಮೊ ಕನ್ನಡ ನಾಡಿಗೆ ಬಂದು ನೆಲೆಸಿದ ಆದ್ಯ ಕ್ರಿಸ್ತೀಯ. ಆತನು ಕ್ರಿ.ಶ.೧೬೪೯ರಲ್ಲಿ ಮೈಸೂರಿಗೆ ಬಂದು ಮಿಶನ್ ಕೇಂದ್ರವನ್ನು ತೆರೆದು ಮತ ಪ್ರಸಾರ ಧ್ಯೇಯದೊಂದಿಗೆ ಕೃತಿರಚನೆಯ ಕೈಂಕರ್ಯಕ್ಕಿಳಿದನು. ಮರಣ ಪರ್ಯಂತ ಇಲ್ಲೇ ಉಳಿದ. ಸೋಮರ್ ವೊಗೆಲ್ ಎಂಬವನ ಜೆಸುಯೆಟ್ ಗ್ರಂಥಸೂಚಿಯಲ್ಲಿ ದೊರೆತ ಆಧಾರದ ಪ್ರಕಾರ ಚಿನಾಮಿಯ ಕೃತಿಗಳ ಶೀರ್ಷಿಕೆಗಳು ಕ್ರೈಸ್ತ ಧರ್ಮದ ರಹಸ್ಯ ತತ್ವಗಳ ವಿವರಣೆ, ಕ್ರೈಸ್ತ ಧರ್ಮ ಸಮರ್ಥನೆ, ಕ್ರೈಸ್ತ ಸಂತರ ಚರಿತ್ರೆಗಳು ಮೈಸೂರು ಜನರ ಜಾತಿ-ಪದ್ಧತಿ, ಮೂಢನಂಬಿಕೆ, ಇವುಗಳ ಖಂಡನೆ, ಕನ್ನಡ ಶಬ್ದಕೋಶ ಹಾಗೂ ಕನ್ನಡ ವ್ಯಾಕರಣ.

ಕ್ರಿ.ಶ.೧೭೪೯ರ ಕಾಲದ ಎರಡು ಕ್ರೈಸ್ತ ಸಾಹಿತ್ಯದ ಹಸ್ತಪ್ರತಿಗಳು ಲಂಡನ್ನಿನ School of oriental and African Studies ಗ್ರಂಥಾಲಯದ ಮಾರ್ಸ್‌ಡನ್ ಸಂಗ್ರಹದಲ್ಲಿ ಪತ್ತೆಯಚ್ಚಿದ್ದು ಈ ಕನ್ನಡ ಗ್ರಂಥದ್ವಯವು ಹೊಸಗನ್ನಡದ ಆರಂಭಕಾಲವನ್ನು ೮೦ ವರ್ಷಗಳಷ್ಟು ಹಿಂದೆ ಕೊಂಡೊಯ್ದಿದೆ. ಈ ಹಸ್ತಪ್ರತಿಗಳಲ್ಲಿ ಒಂದು ೪೦೦ ಮತ್ತೊಂದು ೩೩೭ ಪಾನುಗಳನ್ನೊಳ ಗೊಂಡಿದ್ದು ಎರಡೂ ಸೇರಿ ೧೭೦೦ ಪುಟಕ್ಕೂ ಮಿಕ್ಕುವುದು. ವಿಷಯದ ದೃಷ್ಟಿಯಿಂದ ಎರಡೂ ಕೃತಿಗಳು ಕೇವಲ ಕ್ರೈಸ್ತ ತತ್ವ ವಿಚಾರಕ್ಕೆ ಸಂಬಂಧಿಸಿದ್ದು.

ಲಂಡನ್ ಮಿಶನ್ ಸಂಸ್ಥೆಯ ಜಾನ್ ಹ್ಯಾಂಡ್ ಎಂಬ ಪ್ರೊಟೆಸ್ಟಂಟ್ ಬಂದ ಕಾಲದಿಂದ ಕ್ರೈಸ್ತ ಸಾಹಿತ್ಯದ ದ್ವಿತೀಯ ಘಟ್ಟ ಆರಂಭವಾಯಿತು. ಮುಂದಿನ ನೂರು ವರ್ಷಗಳ ಕಾಲಾವಧಿಯಲ್ಲಿ ಲಂಡನ್ ಮಿಶನ್ ಸೇರಿದಂತೆ ವೆಸ್ಲಿಯನ್ ಬಾಸೆಲ್ ಮಿಶನ್ನಿನವರು ಧರ್ಮ ಪ್ರಚಾರದ ಜೊತೆಗೆ ಕನ್ನಡ ಸಾಹಿತ್ಯಕ್ಕೂ ಅಪಾರವಾದ ಕೊಡುಗೆಯನ್ನು ನೀಡಿದ್ದಾರೆ. ಇದನ್ನು ಈ ಕೆಳಗೆ ಚರ್ಚಿಸಲಾಗಿದೆ.

**ಲಂಡನ್ ಮಿಶನ್ ಸಂಸ್ಥೆ**

ಜಾನ್ ಹ್ಯಾಂಡ್ಸ್ ಈ ಮಿಶನ್‌ಗೆ ಸೇರಿದವನಾಗಿದ್ದು ಈತ ಲಂಡನ್‌ನಿಂದ ಬಂದ ಆದ್ಯ ಪ್ರೊಟೆಸ್ಟೆಂಟ್ ಮಿಶನರಿಯಾಗಿದ್ದಾನೆ. ಈತ ಬಳ್ಳಾರಿಗೆ ಬಂದ ಮೂರು ವರ್ಷ ಕನ್ನಡ ಕಲಿತು ಬೈಬಲಿನ ಬಹುಭಾಗವನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ವಿಲಿಯಮ್ ರೀವ್ ಐದಾರು ವರ್ಷಗಳ ಪರಿಶ್ರಮದಿಂದ ಇಂಗ್ಲಿಷ್ ಕನ್ನಡ ಶಬ್ದಕೋಶವನ್ನು ಸಿದ್ಧಪಡಿಸಿದ. ಜಾನ್ ರೀಡ್ ಎಂಬಾತ ಹ್ಯಾಂಡ್ಸ್‌ನ ಅನಂತರ ಬಳ್ಳಾರಿಯ ಮಿಶನ್ ಕೇಂದ್ರದ ಸೂತ್ರಗಳನ್ನು ವಹಿಸಿ ತೆಲುಗು-ಕನ್ನಡ ಎರಡೂ ಭಾಷೆಗಳಲ್ಲಿ ಕ್ರೈಸ್ತ ಪುಸ್ತಕಗಳನ್ನು ಅನುವಾದಿಸಿದ್ದಾನೆ. ಅಲ್ಲದೆ ಅವನ ಇಂಗ್ಲಿಷ್ ಭಾಷೆಯನ್ನು ಕಲಿಯುವುದಕ್ಕೆ ಸಹಾಯವು ಎಂಬ ಪುಸ್ತಕ ಅತ್ಯಂತ ಪ್ರಮುಖವಾದುದು, ಬೆಯ್ನನ್ ಎಂಬಾಂತ 'ಫಿಲ್‌ಗ್ರಿಮ್ಸ್ ಪ್ರೊಗ್ರೆಸ್' ನ ಪ್ರಥಮ ಅನುವಾದಕ. ಕಾಲಿನ್ ಕ್ಯಾಂಬೆ; ಪ್ರಾಥಮಿಕ ಶಿಕ್ಷಣದಲ್ಲಿ ವಿಶೇಷ ಆಸಕ್ತಿ ವಹಿಸಿ 'ಕನ್ನಡ ವ್ಯಾಕರಣ ಸಾರ'ವನ್ನು ಬರೆದಿದ್ದಾನೆ. 'Knowledge is power and especially so when based upon the words of God and imbided in early life" ಎಂಬ ಕಾರ್ಯಸೂತ್ರದೊಂದಿಗೆ ನಾಲ್ಕು ದಶಕಗಳ ಕಾಲ ಬೆಂಗಳೂರಿನ ಸಾರ್ವಜನಿಕ ಜೀವನದಲ್ಲಿ ಬೆರೆತವನೀತ. 'ದೇಶಭಾಷೆಯಲ್ಲಿನ ಮತ ಪುಸ್ತಕಗಳು ದೇಶೀಯರ ವಿಚಾರ ಪ್ರವೃತ್ತಿಗೆ ಅನುಗುಣವಾಗಿರಬೇಕು' ಎಂದು ವಾದಿಸಿದನು. ಇದರಿಂದ ಬೈಬಲ್ ಬೋಧನೆ ಇರುವ 'ವೇದ ಸಂಗ್ರಹವು' ದೇಶೀಯರನ್ನು ಗಮನದಲ್ಲಿರಿಸಿಯೇ ರಚಿತವಾಗಿತ್ತು. ಹಾಡುಗಳ ರಚನೆಗೆ ಇವನದು ಗಣನೀಯ ಕೊಡುಗೆ. ದಾಸರ ಹಾಡುಗಳ ಮಾದರಿಯಲ್ಲಿ ಗೀತೆಗಳನ್ನು ಈತ ರಚಿಸಿದ್ದಾನೆ.

**ವೆಸ್ಲಿಯನ್ ಮೆಥಾಡಿಸ್ಟರು**

ವೆಸ್ಲಿಯನ್ ಮೆಥಾಡಿಸ್ಟರು ಹಲವು ಮೇಲ್ಮಟ್ಟದ ಕೃತಿಗಳನ್ನು ರಚಿಸಿದ್ದಾನೆ. ಥಾಮಸ್ ಹಡ್ಸನ್ ಎಂಬಾತ ಮೆಕ್ಕೈರಲ್ ವಿರಚಿತ Grammer of the Carnatic Language ಎಂಬ ಕೃತಿಯನ್ನು ರಚಿಸಿದ್ದಾನೆ. ಜಾನ್ ಗ್ಯಾರೆಟ್‌ನು ಹದಿನಾರು ಸಾವಿರ ಶಬ್ದಗಳಿಗೆ ಚುಟುಕಿನಲ್ಲಿ ಇಂಗ್ಲಿಷ್ ಸಮಾನಾರ್ಥಕೊಡುವ ಕೋಶ, ಬಹುಭಾಷಾ 'ಭಗವದ್ಗೀತೆ'ಯ ಕನ್ನಡಾನುವಾದ, Classical Dictionary of India ಮುಂತಾದ ಕೃತಿಗಳ ಕರ್ತೃ, ಡ್ಯಾನಿಯಲ್ ಸ್ಯಾಂಡರ್ಸನು ಕನ್ನಡ-ಇಂಗ್ಲಿಷ್ ಕೋಶದ ಪರಿಷ್ಕೃತ ಆವೃತ್ತಿಯನ್ನು ಸಿದ್ಧಪಡಿಸಿದ್ದಾನೆ. ಜೆ.ಸ್ಟೀವನ್ಸ್ ಕೆಂಪುನಾರಾಯಣನ 'ಮುದ್ರಾಮಂಜೂಷಾ'ವನ್ನು ಸಂಪಾದಿಸಿ, ಸಂಕ್ಷೇಪಿಸಿ ಪ್ರಕಟಿಸಿದ್ದಾನೆ.

ಈ ಮಿಶನರಿಯ ಹನ್ರಿ ಹೇಗ್ 'ವೃತ್ತಾಂತ ಪತ್ರಿಕೆ' ಎಂಬ ಪ್ರಸಿದ್ಧ ನಿಯತಕಾಲಿಕವನ್ನು ಮೈಸೂರಿನಿಂದ ಅನೇಕ ವರ್ಷಗಳ ಕಾಲ ಹೊರಡಿಸಿದ್ದಾನೆ.

**ಬಾಸೆಲ್ ಮಿಶನ್**

೧೮೩೪ರಲ್ಲಿ ಸ್ಯಾಮ್ಯುಯೆಲ್ ಹೆಬಿಕ್ ಎಂಬವನಿಂದ ಸ್ಥಾಪಿತವಾದ ಬಾಸೆಲ್ ಮಿಶನರಿಯು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡುಗೆ ಗಣನೀಯವಾದುದು. ಇವರಲ್ಲಿ ಪ್ರಮುಖರಾದವರು ಹರ್ಮನ್ ಮೊಗ್ಲಿಂಗ್ ಹಾಗೂ ಫರ್ಡಿನಾಂಡ್ ಕಿಟೆಲ್.

ಹರ್ಮನ್ ಮೊಗ್ಲಿಂಗ್‌ನು ಧರ್ಮಪ್ರಸಾರ, ಶಿಕ್ಷಣ ಮತ್ತು ಸಾಹಿತ್ಯ ಮೂರು ರಂಗದಲ್ಲಿ ಅಪಾರ ಸೇವೆಯನ್ನು ಸಲ್ಲಿಸಿದ್ದಾನೆ. ಈತನು ಬಾಸೆಲ್ ಮಿಶನ್ನಿನ ನೇತಾರನಾಗಿದ್ದನು.

ಹೊಸಗನ್ನಡ ಸಾಹಿತ್ಯ ಕ್ಷೇತ್ರ ಅನುಪಮವಾದ ಕೊಡುಗೆಯನ್ನು ಸಲ್ಲಿಸಿದ ಫರ್ಡಿನಾಂಡ್ ಕಿಟೆಲ್ ಮಿಶನರಿಗಳಲ್ಲಿಯ ಅಗ್ರಗಣ್ಯರು. ಈ ಹಿಂದೆ ಆಗಿರದ ಮುಂದೆಯೂ ನಡೆಯದ ದೊಡ್ಡ ಸಾಧನೆ 'ಕನ್ನಡ ನಿಘಂಟು' ರಚನೆ ಈತನ ಕೊಡುಗೆ.

ಅಲ್ಲದೆ ಸೂಕ್ಷ್ಮದರ್ಶಿಯೂ ಸಾರಾಸಾರ ವಿವೇಚನೆಯುಳ್ಳವನೂ ಆಗಿದ್ದ ಗಾಡ್‌ಪ್ರೆಯ್ಗಲ್, ಕನ್ನಡವನ್ನು ಆಳವಾಗಿ ಅಭ್ಯಸಿಸಿ ಪ್ರಾಕಾವ್ಯ ಮಾಲಿಕೆ ಗ್ರಂಥವನ್ನು ಬರೆದದ್ದಲ್ಲದೆ ಬಸವಪುರಾಣ ಮತ್ತು ಚನ್ನಬಸವ ಪುರಾಣದ ಸಾರವನ್ನು ಇಂಗ್ಲಿಷ್‌ನಲ್ಲಿ ಬರೆದ ಡಬ್ಲ್ಯೂಜಿ ವುರ್ತ್, ಮೊಗ್ಲಿಂಗನ ಜೊತೆಗೆ ಪ್ರಾರ್ಥನಾ ಗೀತೆ ರಚಿಸಿದ ಡಬ್ಲ್ಯೂ ಹಾಕ್ ಮುಂತಾದವರು ಸ್ಮರಣೀಯರು.

**ಕೆಥೆಲಿಕ್ ವಾಙ್ಮಯ**

ಸಾಹಿತ್ಯ ರಚನೆಯಲ್ಲಿ ಪ್ರೊಟೆಸ್ಟಂಟರಿಗಿದ್ದ ಆಸಕ್ತಿ ಕೆಥೆಲಿಕರಿಗೆ ಇರಲಿಲ್ಲ. ಬಹುಶಃ ಅದರ ಅಗತ್ಯತೆಯೂ ಅವರಿಗೆ ಅಷ್ಟಾಗಿ ಇರಲಿಲ್ಲ. ಆದರೆ ಪ್ರೊಟೆಸ್ಟಂಟರ ಇದಿರಿಗೆ ಸುಮ್ಮನಿರುವುದು ಸಾಧ್ಯವಾಗಲಿಲ್ಲ. ಹಾಗಾಗಿ ಕಡಿಮೆ ಎನಿಸಿದರೂ ಸ್ವಲ್ಪ ಮಟ್ಟಿನ ಕೆಲಸ ಇವರಿಂದಲೂ ಆಗಿದೆ. ಇವರ ಪ್ರತೋದಕನಾದದ ಎಲ್ ಶರ್ಬೊನಾ ಈತ ಕ್ರಿ.ಶ ೧೮೫೦ರಲ್ಲಿ ಕೆಥಲಿಕ್ ಪ್ರೆಸ್ ಸ್ಥಾಪಿಸಿ ಮತೀಯ ಮತ್ತು ಶಾಲೆಯ ಪುಸ್ತಕಗಳನ್ನು ಹೊರತಂದನು. ಈತನ 'ಜಪದ ಪುಸ್ತಕವು' ರೋಮನ್ ಕೆಥಲಿಕರ ಧಾರ್ಮಿಕ ವಿಧಿನಿಯಮಗಳ ದೊಡ್ಡ ಹೊತ್ತಗೆ, ಕನ್ನಡ ಲ್ಯಾಟಿನ್ ಹಾಗೂ ಲ್ಯಾಟಿನ್ ಕನ್ನಡ ಕೋಶಗಳು ಈತನ ಪ್ರಮುಖ ಕೃತಿಗಳು. ಕೆಥಲಿಕರ 'ಶ್ಲೋಕ ಸಂಗ್ರಹ' ಹಾಗೂ 'ಪರಮಾರ್ಥ ಗುರುವಿನ ಕಥೆ' ಎರಡು ಪ್ರಮುಖವಾದ ಕೃತಿಗಳು. ಹಾಗೂ ಪ್ರೊಟೆಸ್ಟೆಂಟರನ್ನು ವಿರೋಧಿಸಿ ಬಂದ ಕೃತಿಗಳು 'ವೇದಮಾರ್ಪಡಿಸುವಿಕೆ ಖಂಡನೆ' ಹಾಗೂ 'ಪ್ರೊತೆಸ್ತಾಂಟ್‌ಯೆಂಬ ಪತಿತರ ಮಾರ್ಗ', 'ಕ್ರಿಸ್ತನಾಥರ ಅನುಸಾರವು' ಹಾಗೂ 'ಆತ್ಮಸ್ನೇಹ' ಕೃತಿಗಳು ಸಹ ಕೆಥಲಿಕರ ಕೊಡುಗೆಯಾಗಿದೆ. ಕೆಥಲಿಕರ ಸಾಹಿತ್ಯ ಸಂಖ್ಯೆಯಲ್ಲಿ ಕಡಿಮೆ ಎನಿಸರೂ, ಹೊಸಗನ್ನಡ ಸಾಹಿತ್ಯದ ಆರಂಭಕಾರರು ಇವರೇ ಆಗಿದ್ದಾರೆ.

ಹೀಗೆ ಪ್ರೊಟೆಸ್ಟಂಟ್ ಮಿಶನರಿಗಳು ಮತ್ತು ಕ್ಯಾಥಲಿಕ ಧರ್ಮ ಪ್ರಚಾರಕ್ಕೆ ಪೂರಕವಾಗಿ

ರಚಿಸಿದ ಕೃತಿಗಳು ಕನ್ನಡ ಸಾಹಿತ್ಯಕ್ಕೆ ಅಪೂರ್ವವಾದ ಕೊಡುಗೆಗಳಾಗಿ ಮಾರ್ಪಟ್ಟಿದ್ದು ಮುಂದೆ ೨೦ನೇ ಶತಮಾನದ ಹೊತ್ತಿಗೆ ಇಲ್ಲಿಯ ಸ್ವರಾಜ್ಯ ಚಳವಳಿ, ಮತಾಂತರ ಜಾಗೃತಿ ಮತ್ತಿತರ ಕಾರಣಗಳಿಂದ ಇವರ ಸಾಹಿತ್ಯ ರಚನೆಯು ಕ್ಷೀಣಿಸಿತು.

**ಪ್ರಮುಖ ಮಿಶನರಿಗಳ ಬದುಕು ಮತ್ತು ಸಾಹಿತ್ಯ**

ಕ್ರೈಸ್ತ ಸಾಹಿತ್ಯಕ್ಕೆ ತನ್ಮೂಲಕ ಕನ್ನಡ ಸಾಹಿತ್ಯ ಲೋಕಕ್ಕೆ ಅಪಾರವಾದ ಕೊಡುಗೆಯನ್ನು ನೀಡಿದ ಮಿಶನರಿಗಳ ಬದುಕು ಮತ್ತು ಸಾಹಿತ್ಯದ ಬಗ್ಗೆ ವಿಶೇಷವಾದ ಅಧ್ಯಯನವನ್ನು ನಡೆಸಿದ ಡಾ.ಶ್ರೀನಿವಾಸ ಹಾವನೂರರು ಅಪಾರವಾದ ಮಾಹಿತಿಯನ್ನು ನೀಡಿದ್ದು ಅವುಗಳಲ್ಲಿ ಕೆಲವರ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ.

**'ಹ್ಯಾಂಡ್ಸ್'**

ಜಾನ್ ಹ್ಯಾಂಡ್ಸ್ ಆದ್ಯ ಮಿಶನರಿಯಾಗಿ ಬಳ್ಳಾರಿಗೆ ಬಂದು ನೆಲೆಸಿದ. ಅನಂತರದವರಿಗೆ ದೊರೆತ ಯಾವುದೇ ರೀತಿಯ ವ್ಯಾಕರಣಾದಿ ಭಾಷಾ ಸಾಧನಗಳು ಈತನಿಗೆ ದೊರೆಯದಿದ್ದರೂ ಪರಿಶ್ರಮ ಪೂರ್ವಕವಾಗಿ ಕನ್ನಡವನ್ನು ಕಲಿತ. ಮಾತ್ರವಲ್ಲ ಕ್ರಿಶ ೧೮೧೨–೧೩ರ ಹೊತ್ತಿಗೆ ಕನ್ನಡ ವ್ಯಾಕರಣವನ್ನು, ಶಬ್ಧಕೋಶವನ್ನು ರಚಿಸಲುದ್ಯುಕ್ತನಾದನು. ಅಲ್ಲದೆ ೧೮೧೨ನೆಯ ವರ್ಷದಲ್ಲೇ ಮ್ಯಾಥ್ಯೂ, ಮಾರ್ಕ್, ಲ್ಯೂಕ್‌ರ ಸುವಾರ್ತೆಗಳು ಮತ್ತು ಡಾ. ಮ್ಯಾಕ್ ಎಂಬವನ ಪ್ರಶ್ನೋತ್ತರ ರೂಪಿಯಾದ ಮತ ಪುಸ್ತಕವನ್ನೂ ಹಾಗೂ ಹೊಸ ಒಡಂಬಡಿಕೆಯನ್ನು ಅನುವಾದಿಸಿದ್ದನು. ಕ್ರಿ.ಶ. ೧೯೧೦ರಲ್ಲಿ ಹ್ಯಾಂಡ್ಸ್ ಮತ್ತು ಅವನ ಸಂಗಡಿಗರು ಶ್ರೀ ರಾಮಪುರದ ದೇಶೀ ಕ್ರಿಸ್ತೀಯನಾಗಿದ್ದ ಪೀತಾಂಬರ ಸಿಂಹನ 'ನೆನಹುಗಳು' 'ಯೇಸು ಕ್ರಿಸ್ತನ ಅವತಾರ' 'ಪರಿಶುದ್ಧಿಯ ಮಾರ್ಗ ವಿವರಣೆ' ಇವುಗಳ ಅನುವಾದಗಳನ್ನು ಸಿದ್ಧಗೊಳಿಸಿದರು. ೧೮೧೮ರಲ್ಲಿ ಒಂದು ಬೈಬಲ್ ಸಂಘವನ್ನು ಸ್ಥಾಪಿಸಿ ಪುಸ್ತಕ ಪ್ರಕಟನೆಗೆ ಹಾದಿ ಮಾಡಿಕೊಂಡರು. ಅಲ್ಲದೆ ಸಮಗ್ರ ಬೈಬಲನ್ನು ಕನ್ನಡದಲ್ಲಿ ಮೊದಲ ಬಾರಿಗೆ ತಂದಂತಹ ಶ್ರೇಯಸ್ಸು ಹ್ಯಾಂಡ್ಸ್‌ಗೆ ಸಲ್ಲಬೇಕು.

ಲಂಡನ್ ಮಿಶನ್ನಿನ ಮುಖ್ಯಸ್ಥನಾಗಿ ಬಹು ಕಾಲ ಬಳ್ಳಾರಿಯಲ್ಲಿ ನೆಲೆಸಿದ ಈತ ಕ್ರಿ.ಶ. ೧೮೪೯ರಲ್ಲಿ ನಿವೃತ್ತನಾಗಿ ಲಂಡನ್ನಿಗೆ ಹಿಂತಿರುಗಿದ. ಇನ್ನೊಮ್ಮೆ ಆಹ್ವಾನವನ್ನು ಪಡೆದ ಈತ ಕ್ರಿ.ಶ. ೧೮೩೨ರಿಂದ ಲಂಡನ್ ಮಿಶನ್ನಿನ ಮದ್ರಾಸ ವಿಭಾಗದ ಕಾರ್ಯದರ್ಶಿ ಯಾಗಿ ಸೇವೆ ಸಲ್ಲಿಸಿದ. ಹ್ಯಾಂಡ್‌ನ ಭಾರತದ ಸಾಧನೆಯ ಅವಲೋಕನದಿಂದ ತಿಳಿದು ಬರುವ ಮುಖ್ಯಾಂಶ ಅವನಲ್ಲಿದ್ದ ಕಾರ್ಯಶ್ರದ್ಧೆ, ಸಹನಗುಣ, ಪರಿಶ್ರಮ ಆದ್ಯ ಮಿಶನರಿಯಾದ ಈತ ಸ್ವತ: ಕನ್ನಡವನ್ನು ಸ್ವಲ್ಪ ಮಟ್ಟಿಗಾದರೂ ಕಲಿತು ಮುಂದಿನವರಿಗೆ ದಾರಿದೀಪವಾದ. ಕರ್ನಾಟಕದಲ್ಲಿ ಪ್ರೊಟೆಸ್ಟೆಂಟ್ ಮತ ಪ್ರಸಾರಕ್ಕೆ ಭದ್ರ ಬುನಾದಿಯನ್ನು ಹಾಕಿದ. ಅಲ್ಲದೆ ಕನ್ನಡದ ಮುದ್ರಣದ ಸಸಿಯನ್ನು ನೆಟ್ಟು ಮುಂದಿನ ಬೆಳಸಿಗೆ ಶ್ರೀಕಾರ ಹಾಕಿದ್ದ.

## 'ಮಿಲಿಯಂ ರೀವ್'

ಭಾಷಾ ಕೋವಿದನಾದ ರೀವ್‌ನನ್ನು ಬಳ್ಳಾರಿಗೆ ಕಳುಹಿಸಿ ಕೊಟ್ಟ ಉದ್ದೇಶವೇ ಅನುವಾದ ಕಾರ್ಯದಲ್ಲಿ ನೆರವಾಗಲು. ಬೈಬಲ್‌ನ ಮತ್ತು ಇತರ ಮತ ಪುಸ್ತಕಗಳ ಅನುವಾದಕ್ಕಾಗಿ ಇಂಗ್ಲಿಷ್-ಕನ್ನಡ ಶಬ್ದಕೋಶದ ಅನಿವಾರ್ಯತೆಯನ್ನು ತಿಳಿದುಕೊಂಡು ಆತ ಇಂಗ್ಲಿಷ್ ಶಬ್ದಕೋಶದಿಂದ ಅಗತ್ಯದ ಶಬ್ದಗಳನ್ನಾಯ್ದು ಅದಕ್ಕೆ ಸಮಾನವಾದ ಕನ್ನಡ ಪದಗಳನ್ನು ಹೊಂದಿಸಿದನು. ಇದು ಅವನ ಶಬ್ದಕೋಶದ ಪ್ರಥಮ ಪೀಠಿಕೆಯಾಗಿದ್ದಿತು.

ಕ್ರಿಶ ೧೮೨೫ರಲ್ಲಿ ದೀರ್ಘರಜೆಯಲ್ಲಿ ಸ್ವದೇಶಕ್ಕೆ ಮರಳಿ ಬಂದ ಕೂಡಲೇ ಇನ್ನೊಂದು ಕೋಶದ ರಚನೆಗೆ ತೊಡಗಿದನು. ಶಬ್ದಸಂಗ್ರಹ ಕಾರ್ಯದಲ್ಲಿ ಸಹಕರಿಸಲು ವಿಳುಜನ ದೇಶೀಯರನ್ನು ಕೆಲಸಕ್ಕಿಟ್ಟು ಕೊಂಡಿದ್ದನು.

ಶಬ್ದಕೋಶದ ರಚನೆಯಲ್ಲಿ ರೀವ್‌ಗೆ ಬ್ರೌನ್ ವಿರಚಿತ ತೆಲುಗು, ಇಂಗ್ಲಿಷ್ ಕೋಶ ಮಾದರಿಯಾಗಿದ್ದರೆ, ಹಳೆಗನ್ನಡ ಕೋಶಗಳಾದ 'ಕರ್ನಾಟಕ ಶಬ್ದ ಮಂಜರಿ', 'ಚತುರಾಸ್ಯ ನಿಘಂಟು', 'ಕಬ್ಬಿಗರ ಕೈಪಿಡಿ' ಮತ್ತು ಹಳಗನ್ನಡದ ಹಸ್ತ ಪ್ರತಿಗಳನ್ನು ಪರಿಶೀಲಿಸಿದ್ದನು. ಆದರೆ ಹಳಗನ್ನಡ ಪದಗಳೆಲ್ಲವನ್ನು ಬಳಸಿಕೊಳ್ಳುವುದು ಕಾಲ ಮಿತಿಯಿಂದ ಸಾಧ್ಯವಾಗಲಿಲ್ಲ. ಕೋಶ ರಚನೆಯ ಕಾಲದಲ್ಲಿ ಆತ ಎದುರಿಸಬೇಕಾಗಿದ್ದ ಅನಾನುಕೂಲತೆಗಳನ್ನು ಪೀಠಿಕೆಯಲ್ಲಿ ನಿವೇದಿಸಿಕೊಂಡಿದ್ದಾನೆ.

ಅವುಗಳು :-

ಪ್ರಾಚೀನ ಕೃತಿಗಳು ದೊರೆಯದೆ ಹೋದುದು, ಪ್ರತಿ ಮಾಡುವವರ 'ದಡ್ಡತನದ ಮಹಾಪ್ರಮಾದಗಳು', ತುಲನೆ ಮಾಡಿ ನೋಡಲು ಇಂಥವೇ ಕೃತಿಗಳು ಇಲ್ಲದಿರುವುದು, ಭಾಷಾಶಾಸ್ತ್ರದ ತಿಳುವಳಿಕೆಯೂ, ಸಾಹಿತ್ಯದ ಸಂಶೋಧನಾ ದೃಷ್ಟಿಯೂ ಇರುವಂಥ ದೇಶೀ ಪಂಡಿತರು ಸಿಕ್ಕದಿದ್ದುದು.

ಕೋಶಗಳಲ್ಲದೆ ರೀವ್‌ನ ಇತರ ಕಾಣಿಕೆಗಳು:- 'ಯೇಸುಕ್ರಿಸ್ತನ ಅವತಾರ' ವೆಂಬ ಕೃತಿ. ಹಳೆಯ ಒಡಂಬಡಿಕೆಯ ಅನೇಕ ಪರ್ವಗಳ ಅನುವಾದ, ಹ್ಯಾಂಡ್ಸ್‌ನ ಬೈಬಲ್ ಅನುವಾದದ ತಿದ್ದುವಿಕೆ.

## 'ಹರ್ಮನ್ ಮೊಗ್ಲಿಂಗ್'

ಕ್ರಿ.ಶ. ೧೮೧೧ರಲ್ಲಿ ಜರ್ಮನಿಯ ಫ್ರಾಕೆನ್ ಹೈಮ್‌ನಲ್ಲಿ ಜನಿಸಿದ ಹರ್ಮನ್ ಮೊಗ್ಲಿಂಗ್ ಎಳವೆಯಲ್ಲಿ ತಾಯಿಯನ್ನು ಕಳೆದುಕೊಂಡಿದ್ದ ಈತನ ತಂದೆ ಪಾದ್ರಿಯಾಗಿದ್ದು, ಎಳವೆಯಲ್ಲಿಯೇ ಅಪಾರವಾದ ಭಾಷಾಪ್ರಭುತ್ವವನ್ನು ಪಡೆದ ಈತ ಕ್ರಿ.ಶ.೧೮೨೯ರಲ್ಲಿ ತೀಬಿಂಜ್‌ನ ವಿಶ್ವವಿದ್ಯಾಲಯವನ್ನು ಸೇರಿ ಐದು ವರ್ಷ ವ್ಯಾಸಂಗ ಮಾಡಿದನು.

ನಿಶಿತ ಬುದ್ಧಿಮತೆ ಜೊತೆಗೆ ಸರಳತೆ. ಭಾವೋದ್ವೇಗ, ಸೇವಾಧರ್ಮ, ಕಷ್ಟಸಹಿಷ್ಣುತೆಯನ್ನು ಜನಸಾರಣ್ಯ ಪಡೆದುಕೊಂಡಿದ್ದ ಮೊಗ್ಲಿಂಗ್ ಬಾಸೆಲ್‌ಗೆ ತಾನಾಗಿ ಹೋಗಿ ಸುವಾರ್ತಿಕನಾಗುವ ಅಪೇಕ್ಷೆಯನ್ನು ತೋರಿದನು. ಅಪ್ರತಿಮ ಬುದ್ಧಿವಂತನಾದ ಈತ ಕೆಲವೇ ಸಮಯಗಳಲ್ಲಿ ತಮ್ಮ ಸಹಪಾಠಿಗಳಿಗೆ ಪಾಠ ಹೇಳುವಷ್ಟು ಮತಿವಂತನಾದಾಗ ಹೆಚ್ಚು

ಸಮಯ ತರಬೇತಿಗಾಗಿ ಇಟ್ಟುಕೊಳ್ಳದೆ ಬೇಗನೇ ಭಾರತಕ್ಕೆ ಕಳುಹಿಸಿಕೊಟ್ಟರು. ಕ್ರಿ.ಶ. ೧೮೩೬ರ ಕೊನೆಯಲ್ಲಿ ಮಂಗಳೂರಿಗೆ ತಲುಪಿ ಹೆಬಿಕ್‌ನನ್ನು ಕೂಡಿಕೊಂಡು ಮುಂದೆ ಧಾರವಾಡ, ಹುಬ್ಬಳ್ಳಿಗಳಲ್ಲಿ ಸುವಾರ್ತಿಕನಾಗಿ ಸಂಚರಿಸಿದನು.

ಹೆಬಿಕ್–ಮೊಗ್ಲಿಂಗರ ಒಡನಾಟದಿಂದ 'ಹೃದಯದರ್ಪಣ'ವೆಂಬ ಚಿಕ್ಕ ಕೃತಿಯೊಂದು ರಚನೆಯಾಯಿತು. ಇದು ಇತರ ಭಾಷೆಗಳಿಗೂ ಅನುವಾದಗೊಂಡು ಪ್ರಸಿದ್ಧಿಯನ್ನು ಪಡೆಯಿತು.

೨೪ ವರ್ಷಗಳಷ್ಟು ಕಾಲ ಈ ದೇಶದಲ್ಲಿ ನೆಲೆಸಿ ಧರ್ಮ ಪ್ರಚಾರದಲ್ಲಿ ತೊಡಗಿದ್ದ ಈತನ ಕಾರ್ಯಸಾಧನೆಯನ್ನು ಈ ರೀತಿಯಾಗಿ ವಿಭಾಗ ಮಾಡಬಹುದು.

೧೮೩೭–೧೮೩೮ ಧಾರವಾಡ, ೧೮೪೯–೧೮೫೧ ಮಂಗಳೂರು, ೧೮೫೨–೧೮೬೦ ಕೊಡಗು

ಧರ್ಮಪ್ರಸಾರ, ಶಿಕ್ಷಣ ಮತ್ತು ಸಾಹಿತ್ಯ ಮೂರೂ ರಂಗಗಳಲ್ಲಿ ಅನುಪಮ ಕಾರ್ಯವನ್ನೆಸಗಿ ಬಾಸೆಲ್ ಮಿಶನ್ನಿನ ನೇತಾರನಾದ ಈತ ೧೮೩೮ರಲ್ಲಿ ಧಾರವಾಡದಿಂದ ಹಿಂತಿರುಗಿ ಮತ್ತೆ ಮಂಗಳೂರಿಗೆ ಬಂದು ದೈವಜ್ಞ ಶಾಲೆಯ ಬೋಧಕನಾದ.

ಕ್ರಿ.ಶ. ೧೮೪೪ರಲ್ಲಿ ಮೊಗ್ಲಿಂಗನ ಜೀವನದಲ್ಲಿ ಮಹತ್ವದ ಸಾಧನೆಯಾಗಿ ಆನಂದರಾಯ ಕೌಂಡಿಣ್ಯನೆಂಬ ಬ್ರಾಹ್ಮಣನನ್ನು ಮತಾಂತರಗೊಳಿಸಿದ. ಇದೇ ಸಮಯದಲ್ಲಿ ಉಚ್ಚ ಜಾತಿಯ ಸಾರಸ್ವತ ಬ್ರಾಹ್ಮಣ ವಂಶದ ಶಾಂತಪ್ಪಯ್ಯನವರ ಮಗ ಭಗವಂತರಾವ (ಕೌಶಿಕ) ಮತ್ತು ಲಕ್ಷ್ಮಣಪ್ಪನ ಮಗ ಮುಕುಂದರವರಿಗೆ ಕ್ರೈಸ್ತ ದೀಕ್ಷೆಯನ್ನು ಕೊಡಿಸಿದ.

ಕ್ರಿ.ಶ. ೧೮೫೨ ಅನಂತರ ಕೊಡಗು ಮೊಗ್ಲಿಂಗನ ಕಾರ್ಯಕ್ಷೇತ್ರವಾಯಿತು. ಆ ಸಂದರ್ಭದಲ್ಲಿ ಆತ ಕೊಡಗಿನ ಜನಜೀವನ, ಸಂಸ್ಕೃತಿ, ಸಂಪ್ರದಾಯ, ಪುರಾಣ ಇತಿಹಾಸ, ಹಬ್ಬ, ಉತ್ಸವಾದಿಗಳು, ಹುತ್ತರಿ ಹಾಡು ಇವುಗಳನ್ನು ಪರಿಚಯಿಸುವ ಲೇಖನ ಮಾಲೆಯೊಂದನ್ನು ಸಿದ್ಧಪಡಿಸಿ ಇಂಗ್ಲಿಷ್ ಪತ್ರಿಕೆಯೊಂದರಲ್ಲಿ ಪ್ರಕಟಿಸಿದನು. ಅದು ಮುಂದೆ "Coorg Memoirs" ಎಂಬ ಪುಸ್ತಕ ರೂಪದಲ್ಲಿ ಹೊರಬಂದಿತು. ಇದರಲ್ಲಿ ವೀರ ರಾಜೇಂದ್ರನ 'ರಾಜೇಂದ್ರನಾಮೆ'ಯ ವಿವರದ ನಿಮಿತ್ತವಾಗಿ ಕೊಡಗಿನ ಸಮಗ್ರ ಇತಿಹಾಸ ಚಿತ್ರಿತವಾಗಿದೆ. ಕ್ರಿ.ಶ.೧೮೦೭ – ೧೮೩೪ರ ಸಂಧಿಕಾಲದ ಕೊಡಗಿನ ಇತಿಹಾಸದಲ್ಲಿ ಇದು ಪ್ರಥಮ ನಿರೂಪಣೆಯಾಗಿತ್ತು.

ಶಿಕ್ಷಣದ ಬಗ್ಗೆ ಅಪಾರವಾದ ಕಾಳಜಿ ಹೊಂದಿದ್ದ ಮೊಗ್ಲಿಂಗನು ಸರಕಾರದ ಧನ ಸಹಾಯ ಬರುವ ಮೊದಲೇ ಕೊಡಗಿನಲ್ಲಿ ಇಂಗ್ಲಿಷ್ ಶಾಲೆಯೊಂದನ್ನು ಪ್ರಾರಂಭಿಸಿದ್ದನು. ಅಲ್ಲದೆ ಕೊಡಗಿನ ಶೈಕ್ಷಣಿಕ ಅಭಿವೃದ್ಧಿ ಯೋಜನೆಯನ್ನು ತಾನು ಖುದ್ದಾಗಿ ಮದ್ರಾಸದ ವರೆಗೆ ಹೋಗಿ ಮಂಜೂರು ಮಾಡಿಸಿಕೊಂಡು ಬಂದಿದ್ದ. ಅಲ್ಲದೆ ತನಗೆ ಬರುತ್ತಿದ್ದ ಮಾಸಿಕ ವೇತನದ ಬಹು ಪಾಲನ್ನು ಶಿಕ್ಷಣ ಕಾರ್ಯಕ್ಕಾಗಿಯೇ ವಿನಿಯೋಗಿಸುತ್ತಿದ್ದ.

ರೀವನ ಕೋಶ, ಕೃಷ್ಣಮಾಚಾರಿಯ ವ್ಯಾಕರಣವನ್ನು ಆಳವಾಗಿ ಅಭ್ಯಾಸ ಮಾಡಿದ್ದ ಈತ ಕನ್ನಡ ಭಾಷೆಯ ಮೇಲೆ ಅಪಾರವಾದ ಪರಿಣತಿಯನ್ನು ಪಡೆದುಕೊಂಡಿದ್ದ.

**ಮೊಗ್ಲಿಂಗನ ಪ್ರಮುಖವಾದ ಕೃತಿಗಳು :**

- ಆದ್ಯ ಪ್ರಬಂಧ ಕೃತಿಗಳು :- ಜಾತಿ (ಮತ) ವಿಚಾರಣೆ ಮತ್ತು ದೇವ ವಿಚಾರಣೆ.
- ಇತರ ಕೃತಿಗಳು: ಯಾತ್ರಿಕನ ಸಂಚಾರ, ಚಿಕ್ಕವನಾದ ಹೆನ್ರಿಯೂ ಅವನ ಬೋಯಿಯೂ, ದೇವವಾಕ್ಯ ವ್ಯಾಖ್ಯಾನ, ಬಾಸೆಲ್ ಮಿಶನ್ನಿನ ಸಭಾಕ್ರಮ.
- ಕನ್ನಡ ಪತ್ರಿಕಾ ಪ್ರಪಂಚದ ಮೊದಲಿಗನಾಗಿ ಕ್ರಿ.ಶ.೧೮೪೩-೪೪ ರಲ್ಲಿ ಮಂಗಳೂರು ಸಮಾಚಾರ ಎಂಬ ಪತ್ರಿಕೆಯನ್ನು ಹೊರಡಿಸಿದ.
- ಧರ್ಮ ಪ್ರಸಾರ, ಶೈಕ್ಷಣಿಕ ಕಾರ್ಯದಲ್ಲಿ ತೊಡಗಿದ್ದ ಮೊಗ್ಲಿಂಗನು ಜನತೆಯೊಡನೆ ಅತ್ಯಂತ ನಿಕಟವಾದ ಸಂಪರ್ಕ ಹೊಂದಿದ್ದ. ಇದರಿಂದ ಜನತೆಯ ಬಾಯಲ್ಲಿ, ಆಗಾಗ ಕೇಳಿ ಬರುತ್ತಿದ್ದ ಪಡೆನುಡಿಗಳು, ಗಾದೆ ಮಾತುಗಳು ಆತನನ್ನು ಆಕರ್ಷಿಸಿದವು. ಇದರಿಂದ ಸಮಯ ದೊರೆತಾಗಲೆಲ್ಲ ಇವುಗಳನ್ನು ಸಂಗ್ರಹಿಸುವುದಲ್ಲಿ ಉತ್ಸುಕನಾದನು ಮತ್ತು ೧೮೪೭ರಲ್ಲಿ ಮೂರು ಸಾವಿರದಷ್ಟು ಗಾದೆಗಳನ್ನು ಪ್ರಕಟಿಸಿದ.
- ಶುದ್ಧ ಸಾಹಿತ್ಯಿಕ ದೃಷ್ಟಿಯಿಂದ ಅನುಪಮವಾದ ಸೇವೆ ಸಲ್ಲಿಸಿದ, ಮೊಗ್ಲಿಂಗನು ಕೆಸೆಮೈಜರನೊಂದಿಗೆ ಸೇರಿಕೊಂಡು 'ಬಿಬ್ಲಿಯಾಥೆಕಾ ಕರ್ನಾಟಿಕಾ' ರಚಿಸಿದ.

ಈ ಮಾಲಿಕೆಯಲ್ಲಿ ಜೈಮಿನಿ ಭಾರತ, ತೊರವೆ ರಾಮಾಯಣ, ದಾಸರ ಪದಗಳು, ಕನಕದಾಸರ ಹರಿಭಕ್ತಿಸಾರ, ಕುಮಾರವ್ಯಾಸ ಭಾರತ, ಬಸವ ಪುರಾಣ, ಚೆನ್ನ ಬಸವ ಪುರಾಣ ಮುಂತಾದ ಕೃತಿಗಳು ಮುದ್ರಣಗೊಂಡವು. ಈ ಮಾಲಿಕೆಯ ಸಂಪಾದನೆ ಪ್ರಕಟನೆಗಾಗಿ ಟೀಬಿಂಜ್ ವಿಶ್ವವಿದ್ಯಾಲಯವು ೧೮೫೮ರಲ್ಲಿ ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿತು. ಇದು ಕನ್ನಡದ ಕೆಲಸಕ್ಕಾಗಿ ದೊರೆತ ಮೊತ್ತ ಮೊದಲ ಡಾಕ್ಟರೇಟ್.

ಪುರಂದರದಾಸರ ಹಾಗೂ ಕನಕದಾಸರ ಕೆಲವು ಕೀರ್ತನೆಗಳನ್ನು ಹಾಗೂ ಜೈಮಿನಿ ಭಾರತದ ಹಲವು ಸರ್ಗಗಳನ್ನು ಜರ್ಮನ್ ಭಾಷೆಗೆ ಅನುವಾದಿಸಿ ಪತ್ರಿಕೆಯಲ್ಲಿ ಪ್ರಕಟಿಸಿದನು.

ಹರ್ಮನ್ ಮೊಗ್ಲಿಂಗನು ಕ್ರಿ.ಶ. ೧೮೬೦ರಲ್ಲಿ ಸ್ವದೇಶಕ್ಕೆ ಹಿಂದುರುಗಿದನು. ಆದರೂ ಕನ್ನಡದ ಕೆಲಸವನ್ನು ಕೈಬಿಡಲಿಲ್ಲ. ಬೈಬಲ್ ತತ್ವಜ್ಞಾನಕ್ಕೆ ಸಂಬಂಧಿಸಿದ ವ್ಯಾಖ್ಯಾನವನ್ನು ಅವನು ಪರಿವರ್ತಿಸುತ್ತಲಿದ್ದು, ಮಂಗಳೂರಿನಿಂದ ಅದು ಮುದ್ರಣಗೊಳ್ಳುತ್ತಿತ್ತು. ಆದರೆ ಸುದೀರ್ಘವಾದ ಈ ಗ್ರಂಥವು ಪೂರ್ಣವಾಗುವ ಮೊದಲೇ ಆತ ತೀರಿಕೊಂಡ.

ಹೀಗೆ ಮತಪ್ರಸಾರಕ್ಕಾಗಿ ಬಂದ ಮೊಗ್ಲಿಂಗನು ಕನ್ನಡ ಭಾಷಾಭಿಮಾನಿಯಾಗಿ ಹೊಸಗನ್ನಡ ಗದ್ಯ ಹಾಗೂ ಪದ್ಯ ಮಾರ್ಗದ ಹೊಳಹನ್ನು ಹಾಕಿ, ಹಳಗನ್ನಡದ ಕೃತಿಗಳನ್ನು ಪ್ರಥಮತ: ಸಂಪಾದಿಸಿ, ಕೆಲವನ್ನು ಜರ್ಮನ್ ಭಾಷೆಗೆ ಅನುವಾದಿಸಿ, ಲಿಪಿಸುಧಾರಕನಾಗಿ, ಆದ್ಯ ಪತ್ರಿಕಾಕರ್ತನಾಗಿ, ಇಂದಿನ ವೈಭವದ ಕನ್ನಡ ಸಾಹಿತ್ಯಕ್ಕೆ ಆಸ್ತಿವಾರವನ್ನು ಹಾಕಿದವರಲ್ಲಿ ಪ್ರಮುಖನು.

**'ಫರ್ಡಿನಾಂಡ್ ಕಿಟೆಲ್'**

ಜರ್ಮನ್ ದೇಶದ ರಾಸ್ಟರ್ ಹಾಫ್ ಎಂಬಲ್ಲಿ ಮತ ಪ್ರಚಾರಕ ಮನೆತನದ ಮಗನಾಗಿ

ದಿನಾಂಕ:೦೭.೦೪.೧೮೩೨ ರಂದು ಫರ್ಡಿನಾಂಡ್ ಕಿಟೆಲ್ ಜನಿಸಿದನು. ಮೂರು ವರ್ಷಗಳ ಕಾಲ ಮತ ಪ್ರಚಾರಕ ವಿಷಯದ ಅಧ್ಯಯನವನ್ನು ಕೈಕೊಂಡು ದಿನಾಂಕ: ೨೦.೧೦.೧೮೫೩ ರಂದು ಮಂಗಳೂರಿಗೆ ಬಂದನು. ಹೀಗೆ ಮತ ಪ್ರಚಾರಕ್ಕಾಗಿ ಬಂದ ಕಿಟೆಲ್ ತನ್ನ ಕಾರ್ಯ ಕ್ಷೇತ್ರದ ನೆಲದ ಸಂಸ್ಕೃತಿಯ ಮತ್ತು ಭಾಷೆಯ ಬಗ್ಗೆ ಒಲವು ಬೆಳೆಸಿಕೊಂಡನು. ಈ ಹಿನ್ನೆಲೆಯಲ್ಲಿ ಕನ್ನಡದ ಅಧ್ಯಯನವನ್ನು ಅತ್ಯಂತ ಆಳವಾಗಿ ಕೈಗೊಂಡಿದ್ದಲ್ಲದೆ ಆ ಕಾಲದಲ್ಲಿ ಲಭ್ಯವಿದ್ದ ಹಿಂದೂ ಧರ್ಮ, ಇತಿಹಾಸಗಳಿಗೆ ಸಂಬಂಧಿಸಿದ, ಇಂಗ್ಲಿಷ್, ಸಂಸ್ಕೃತ ಕೃತಿಗಳನ್ನು ಅಭ್ಯಸಿಸಿದರು. ಭಾಷಾ ವಿಷಯದಲ್ಲಿ ಸೂಕ್ಷ್ಮ ದೃಷ್ಟಿ, ಕಾವ್ಯ ಮತ್ತು ತತ್ವಜ್ಞಾನಗಳಲ್ಲಿ ಅಪಾರ ಶ್ರದ್ಧೆ, ಅದ್ಭುತ ಮೇಧಾ ಶಕ್ತಿ ಇವುಗಳ ಸಂಯೋಗದಿಂದ ಕಿಟೆಲ್ ನಾಡಿನ ಶ್ರೇಷ್ಠ ವಿದ್ವಾಂಸನಾಗಿ ಗುರುತಿಸಲ್ಪಟ್ಟನು.

**ಕಿಟೆಲ್‌ನ ಸಾಹಿತ್ಯ**

ಕಥಾಮಾಲೆ –> ಕಿಟೆಲ್‌ನಿಗೆ ಕೊಡಗು ಪ್ರದೇಶವೇ ಸಾಹಿತ್ಯಿಕ ತಪೋಭೂಮಿ ಯಾಗಿತ್ತು. ಕಿಟೆಲನು ಹೊಸಗನ್ನಡದಲ್ಲಿ ಕವಿತಾ ರಚನೆಗೆ ನಾಂದಿ ಹಾಡಿದವನು. ಅವನ ಸಾಹಿತ್ಯ ಸೇವೆಯು ಕವಿತೆಯಿಂದ ಮೊದಲಾಗಿತ್ತು. ಮತ ಪ್ರಸಾರದ ದೃಷ್ಟಿಯಿಂದ ಕವಿತೆಯೂ ಮಹತ್ವದ ಪಾತ್ರವನ್ನು ವಹಿಸುತ್ತದೆ ಎಂಬುದನ್ನು ಅರ್ಥ ಮಾಡಿಕೊಂಡು ಕ್ರೈಸ್ತ ಮತ ಪ್ರಚಾರಕ ಮಿಶನರಿಯು ಕನ್ನಡ ಕಾವ್ಯಗಳನ್ನು ಅವಶ್ಯವಾಗಿ ಅಭ್ಯಸಿಸಬೇಕು. ದೈವಜ್ಞಾನ ಶಾಲೆಯಲ್ಲಿ ಇದು ಕಡ್ಡಾಯವಾಗಬೇಕು. ಹೀಗೆ ಕಲಿತವರು ಮುಂದೆ ಕನ್ನಡದಲ್ಲಿ ಅದೂ ದೇಶೀಯ ರಾಗದಲ್ಲಿ ಪದ್ಯಗಳನ್ನು ರಚಿಸಬೇಕು ಎಂದು ಒತ್ತಿ ಹೇಳಿದ್ದನು. ಈ ಬಗೆಯ ಸಂಕೀರ್ತನೆಯಿಂದ ಮತ ಪ್ರಸಾರದ ಮೇಲೆ ಆಗುವ ಇತ್ಯಾತ್ಮಕ ಪರಿಣಾಮದ ಬಗ್ಗೆ ಅಶ್ವಘೋಷ, ಚೈತನ್ಯರನ್ನು, ಬೌದ್ಧಮತ, ಕೃಷ್ಣಭಕ್ತಿ, ಬ್ರಹ್ಮ ಸಮಾಜದ ಉದಾಹರಣೆಯನ್ನು ನೀಡಿದ್ದಾನೆ. ಈ ಬಗ್ಗೆ ಕಿಟೆಲ್ ಸ್ವತ: ಕಾರ್ಯ ಪ್ರವೃತ್ತನಾಗಿ ಬೈಬಲಿನ ಹೊಸ ಒಡಂಬಡಿಕೆಯನ್ನು ಕಥನ ರೂಪವಾಗಿ 'ಕಥಾಮಾಲೆ' ಎಂಬ ಕೃತಿಯ ಮೂಲಕ ತಂದಿದ್ದಾನೆ. ಇದರಲ್ಲಿ ೪೭೫ ಪದ್ಯಗಳು ಭಾಮಿನಿ, ವಾರ್ಧಕ ಹಾಗೂ ಪೂರ್ವಿ ರಾಗದ ರೂಪದಲ್ಲಿದೆ.

**ಇಂಡಿಯಾ ಮತ್ತು ಅನ್ಯ ದೇಶಿಕ ವಾರ್ತಿಕ (ಪತ್ರಿಕೆ)** –

ಮಿಶನ್ನಿನವರು ಸುದ್ದಿಪತ್ರಿಕೆಯನ್ನು ಹೊಂದಿಸಬೇಕು ಎಂಬ ಯೋಚನೆಯಿಂದ ೧೮೬೨ನೇಯ ವರ್ಷದಲ್ಲಿ ಜೆ. ಮ್ಯಾಕ್ ಎಂಬವನ ಜೊತೆ ಸೇರಿ "ಇಂಡಿಯಾ ಮತ್ತು ಅನ್ಯ ದೇಶಿಕ ವಾರ್ತಿಕ" ಎಂಬ ಪತ್ರಿಕೆಯನ್ನು ಹೊರಡಿಸಿದನು.

**ಪರಮಾತ್ಮ ಜ್ಞಾನ**

ಹಿಂದೂ ಧರ್ಮ ದೇವತೆಗಳ ಟೀಕೆ ಇರುವ ತಾತ್ವಿಕ ವಿವೇಚನೆವುಳ್ಳ ಕೃತಿ.

**ಯೇಸುವಿನ ಶ್ರಮೇ ಚರಿತ್ರೆ** –>ಇದು ಯೇಸುವಿನ ಕಡೆಯ ದಿನದ ಚಿತ್ರಣವಿರುವ ಗದ್ಯ ರೂಪದ ಮಹತ್ವದ ಕೃತಿ. ಬಾಸೆಲ್ ಮಿಶನ್ನಿನ ಬೋಧನಾ ಕ್ರಮದ ಕೈಪಿಡಿಯಲ್ಲಿ

ಇದು ಸ್ಪರ್ಧೆಯಾದದ್ದು ಇದರ ಶ್ರೇಷ್ಠತೆಯನ್ನು ಸೂಚಿಸುತ್ತದೆ.

**ಕ್ರೈಸ್ತ ಸಭಾ ಚರಿತ್ರೆ** -> ಇದು ೭೬೬ ಪುಟಗಳ ಅನುವಾದ ಗ್ರಂಥ

ಕ್ರಿ.ಶ. ೧೮೫೫ರಲ್ಲಿ 'Bible doctrine of reconciliation' ಕುರಿತು ಮಲೆಯಾಳಿ ಭಾಷೆಯಲ್ಲಿ ಬರವಣಿಗೆ.

ಪಠ್ಯಪುಸ್ತಕಕ್ಕಾಗಿ ಪಂಚತಂತ್ರ ಮತ್ತು ಮಾರಿಸ್‌ಕೃತ ಇಂಗ್ಲೆಂಡಿನ ಇತಿಹಾಸ ಅನುವಾದ, ಹಳಗನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟ ಎರಡು ಕ್ರಮಿಕ ಪುಸ್ತಕಗಳು, ಸಂಣ ಕರ್ನಾಟಕ ಮಾಲೆ, ಹಳೆಗನ್ನಡ ಸಂಕ್ಷೇಪ ವ್ಯಾಕರಣ ಸೂತ್ರಗಳು. ವಾಚನ ಪಾಠಮಾಲೆ, ಕಾವ್ಯಮಂಜರಿ – ಪ್ರಾಥಮಿಕ ವರ್ಗದ ಮಕ್ಕಳಿಗಾಗಿ.

**ಶಬ್ದಮಣಿ ದರ್ಪಣ**:– ಇದನ್ನು ಕ್ರಿ.ಶ.೧೮೭೨ರಲ್ಲಿ ಶಾಸ್ತ್ರೀಯವಾಗಿ ಸಂಪಾದಿಸಿದನು. ಅವನ ಮುಂದಿನ ಮಹತ್ವದ ಸಾಧನೆಗಳಾದ ಕೋಶ ವ್ಯಾಕರಣದ ಅಧ್ಯಯನ, ಸಂಶೋಧನೆಗೆ ಇದುವೆ ತಾಯಿ ಬೇರು. ವಿವಿಧ ವ್ಯಾಕರಣಗಳ ನಿಯಮಗಳನ್ನು ಇದರಲ್ಲಿ ಸೂತ್ರ ರೂಪದಲ್ಲಿ ನೀಡಿದ್ದು ಆಧಾರವಾಗಿ ಶಬ್ದಮಣಿ ದರ್ಪಣದ ಸೂತ್ರಗಳನ್ನು, ಅದರ ಲಕ್ಷ್ಯಪದ್ಯಗಳನ್ನು ಉದಾಹರಿಸಿದ್ದಾನೆ. ಶಾಸ್ತ್ರೀಯವಾಗಿ ಆಧುನಿಕ ರೀತಿಯಲ್ಲಿ ಸಂಪಾದಿಸಿದ ಮೊತ್ತ ಮೊದಲಿನ ಕೃತಿ ಇದು. ಈ ಮೂಲಕ ವಿವಿಧ ಹಸ್ತ ಪ್ರತಿಗಳ ಕೂಲಂಕಷ ಪರಿಶೀಲನೆ, ಪಾಠಾಂತರಗಳ ಅಡಿ ಟಿಪ್ಪಣಿ. ಪದ್ಯ ಭಾಗದ ಸುಸ್ಪಷ್ಟ ರೂಪ, ಸವಿವರ ಪೀಠಿಕೆ, ಅನುಬಂಧ. ಈ ಬಗೆಯ ಗ್ರಂಥ ಸಂಪಾದನೆಯ ಮಾರ್ಗವನ್ನು ಈ ಮೂಲಕ ಕಿಟೆಲ್ ಕನ್ನಡಿಗರಿಗೆ ಪ್ರಥಮತ: ತೋರಿಸಿಕೊಟ್ಟಿದ್ದಾನೆ.

ನಾಗವರ್ಮನ ಛಂದೋಂಬುಂಧಿಯ ಪರಿಷ್ಕರಣ -> ಇದು ಕನ್ನಡ ಸಾಹಿತ್ಯದ ಸಮಷ್ಟಿರೂಪದ ಚಿತ್ರಣವನ್ನು ಕೊಡುವ ದೀರ್ಘ ಪ್ರಬಂಧ.

ದ್ರಾವಿಡ ಭಾಷಾ ಲಿಪಿಗಳ ಅಕ್ಷರೀಕರಣಕ್ಕೆ ಸಂಬಂಧಿಸಿದ ಲೇಖನ.

೧೮೭೨ರಲ್ಲಿ ಜನ್ಮ ತಾಳಿದ 'ಇಂಡಿಯನ್ ಎಂಟೆಕ್ವೆರಿ' ಪತ್ರಿಕೆಯಲ್ಲಿ ಪ್ರಕಟಿಸಿದ ಬರಹಗಳು.

ದ್ರಾವಿಡ – ಆರ್ಯನ್ ಶಬ್ದಗಳ ತುಲನೆ, ಕೊಡಗಿನ ಜೀವನ, ಕನ್ನಡ ವಾಙ್ಮಯಕ್ಕೆ ಸಂಬಂಧಿಸಿದ ವಿಷಯಗಳ ಅನುವಾದ. ಉದಾ:– ಸರ್ವಜ್ಞ ವಚನ, ವೀರಶೈವ ಶರಣರು, ವೈಷ್ಣವ ದಾಸರ ಪರಿಚಯ, ರೈಸ್ ಹೊರತಂದು 'ಬೆಳತೂರು ಶಾಸನ'ಗಳನ್ನು, ಭಾಷಾಶಾಸ್ತ್ರ ಛಂದಸ್ಸುಗಳ ದೃಷ್ಟಿಯಿಂದ ವಿವೇಚನೆ. ಹಿಂದೂ ದೇವರ ಸರ್ವಜ್ಞತ್ವ ಮತ್ತು ಬಹುರೂಪತ್ವಗಳ ಕುರಿತ ಪುಸ್ತಕ.

Tract on Sacrifice (ಯಜ್ಞಸುಧಾನಿಧಿ):– ಯಜ್ಞಗಳನ್ನೇ ಗಮನದಲ್ಲಿಟ್ಟುಕೊಂಡು ಸಮಷ್ಟಿಯಾಗಿ ಬರೆದಿರುವ ಪ್ರಥಮ ಕೃತಿ.

**ಲಿಂಗಪೂಜೆಯನ್ನು ಕುರಿತಾದ ಕೃತಿ**

ಇದು ಕಿಟೆಲನ ಪ್ರಗಲ್ಭವಾದ ವಿದ್ವತ್ತನ್ನು ಸೂಚಿಸುವ ಕೃತಿ. ಇಲ್ಲಿ ಲಿಂಗ ಪೂಜೆಯು ಅನಾರ್ಯರಿಂದ ಬಂದದ್ದೆಂಬ ಜೆ. ಸ್ಟೀವನ್ಸನ್, ಲಾಸ್ಸೆನ್. ಡಬ್ಲ್ಯೂ. ಜರ್ಮನ್

ಮೊದಲಾದವರ ಅಭಿಪ್ರಾಯಕ್ಕೆ ವಿರುದ್ಧವಾಗಿ, ಅದು ಆರ್ಯರಿಂದಲೇ ಬಂದದ್ದೆಂದು ಸಾಧಿಸಿದ್ದಾರೆ.

**ಶಬ್ದಕೋಶ**

ಭಾರತಕ್ಕೆ ಬಂದ ಆರಂಭದಲ್ಲಿ ಕನ್ನಡ ಕಲಿಯಲು ರೀವ್‌ನ ಕೋಶವನ್ನು ಪರಿಶೀಲಿಸುತ್ತಿದ್ದಾಗ ಅದರ ಅಸಮರ್ಪಕತೆ, ಕನ್ನಡ ಹಸ್ತ ಪ್ರತಿಕಾರರ ಶಾಬ್ದಿಕ ತಪ್ಪುಗಳು, ಕನ್ನಡ ಸಂಸ್ಕೃತ ಜನ್ಯವೆಂದು ಹಳೆಗನ್ನಡ ಕೋಶಕಾರರೂ, ವೈಯಾಕರಣಿಗಳೂ ಮಾಡಿದ ತಪ್ಪುಗಳು, ಕಿಟೇಲನಿಗೆ ಶಬ್ದಕೋಶದ ರಚನೆಗಳ ಪ್ರೇರಣೆಯಾಗಿರಬಹುದು.

ಕಾಲ್ಡ್‌ವೆಲ್‌ನ ದ್ರಾವಿಡ ಭಾಷಾ ಸಿದ್ಧಾಂತದಿಂದ ಕನ್ನಡದ ಜಾಡು ಹಿಡಿದು, ಕನ್ನಡ ದೇಶ್ಯ ಶಬ್ದಗಳ ಸಂಶೋಧನೆಗೆ ತೊಡಗಿದನು. ಅದರ ಪ್ರಥಮ ಫಲವೇ 'ಸಂಣ ಕರ್ನಾಟಕ ಮಾಲೆ'

೧೮೭೩ರ ಸುಮಾರಿಗೆ ಒಂದು ಅಧಿಕೃತ ಇಂಗ್ಲಿಷ್ ಕೋಶವನ್ನು ಸಿದ್ಧಪಡಿಸುವುದಕ್ಕೆ ಬಾಸೆಲ್ ಮಿಶನ್ನಿನ ಆಹ್ವಾನ ಕಿಟೆಲ್‌ಗೆ ಬಂದಿತು. ಇದಕ್ಕೆ ಮಾದರಿಯಾಗಿ ಗುಂಡರ್ಟನ ಮಲೆಯಾಳೀ ಶಬ್ದಕೋಶವನ್ನು ಸ್ವೀಕರಿಸಿದ. ೩೬ ಹಳೆಗನ್ನಡ ಕೃತಿಗಳನ್ನು ಪರಿಶೀಲಿಸಿ ಅನೇಕಾನೇಕ ಶಬ್ದಗಳನ್ನು ಹೆಕ್ಕಿ ತೆಗೆದನು, ರೀವ್ ಕೊಟ್ಟಿದ್ದ ಶಬ್ದಗಳ ಜೊತೆಗೆ ಬೇರೆ ಕೋಶಗಳಲ್ಲಿರುವುದನ್ನು ಸಂಕಲಿಸಿದನು. ಈ ಹಿಂದೆ ತಾನು ಸ್ವತಃ ಸಂಗ್ರಹಿಸಿದನ್ನು ಸೇರಿಸಿದನು. ಸಹೋದ್ಯೋಗಿಯಾದ ತ್ಸಿಗ್ಲರ್ ಮತ್ತು ವಸ್ತ್ರದ ಶಿವಲಿಂಗಯ್ಯ ಇವರು ಉತ್ತರ ಕರ್ನಾಟಕದ ಅನೇಕ ಶಬ್ದಗಳ ಪಟ್ಟಿಯನ್ನು ಪೂರೈಸಿದರು. ಹಳೆಗನ್ನಡ ಗ್ರಂಥಸ್ಥ ಶಬ್ದಗಳಲ್ಲದೆ ಜನ ಬಳಕೆಯ ಹಾಗೂ ಶಾಸ್ತ್ರ ಸಂಬಂಧಿತ ಶಬ್ದಗಳನ್ನು ಜತೆ ಸೇರಿಸಿದ, ಮೈಸೂರು ಸಂಸ್ಥಾನದ ಜನಬಳಕೆಯ ಶಬ್ದಗಳನ್ನು ಸಂಗ್ರಹಿಸಿದ. ಹೀಗೆ ಎಲ್ಲಾ ರೀತಿ ಯಿಂದಲೂ ಸಾಧ್ಯವಾದಷ್ಟು ಶಬ್ದಗಳನ್ನು ಸಂಗ್ರಹಿಸಿದ. ಆದರೆ ಅವುಗಳ ಅರ್ಥನಿರ್ಣಯ, ಪ್ರಯೋಗಗಳು, ವ್ಯುತ್ಪತ್ತಿ, ದ್ರಾವಿಡ ಸಮಾನಪದ ರಚನೆ ಮುಂತಾದ ಅಂಶಗಳು ಕಿಟೆಲ್‌ನಿಂದಲೇ ನಿರ್ಣೀತವಾದುವು. ಈ ಎಲ್ಲಾ ಕೆಲಸಗಳು ಮುಗಿದು ಹಸ್ತಪ್ರತಿ ಸಿದ್ಧವಾಗಲು ೧೫ ವರ್ಷಗಳ ಕಾಲ ಕೆಲಸ ಮಾಡಿದ. ಈಗಾಗಲೇ ತನ್ನ ಕಣ್ಣಿನ ನರಗಳ ಶಕ್ತಿಯು ಕುಂಠಿತವಾಗತೊಡಗಿತ್ತಾದರೂ ಅಚ್ಚಿನ ಅತ್ಯಂತ ಸೂಕ್ಷ್ಮ ಕುಸುರಿಯ ಕೆಲಸಗಳನ್ನು ಆಸ್ಥೆಯಿಂದ ನಿರ್ವಹಿಸಿದ್ದ. ಮುಕ್ಕಾಲು ಭಾಗದವರೆಗೆ ಅಚ್ಚಿನ ಕರಡನ್ನು ಕಿಟೆಲ್ ತಿದ್ದಿದ್ದ. ಈ ಕಾರ್ಯದಲ್ಲಿ ಶಿವರಾಮ ಭಾರದ್ವಾಜನೆಂಬವನ ನೆರವು ವಿಶೇಷವಾಗಿ ಲಭ್ಯವಾಗಿದೆ. ಈ ಕೃತಿಯು ಪ್ರಕಟವಾದ ಒಂದೆರಡು ವರ್ಷಗಳಲ್ಲಿಯೇ ಅದು ಕನ್ನಡೇತರರಲ್ಲಿ ವಿಶೇಷವಾದ ಮನ್ನಣೆಗೆ ಪಾತ್ರವಾಯಿತು. ೧೮೯೬ರಲ್ಲಿ ತೀಬಿಂಜ್‌ನ ವಿಶ್ವವಿದ್ಯಾಲಯವು ಕಿಟೆಲನಿಗೆ 'ಡಾಕ್ಟರೇಟ್ ಆಫ್ ಪಿಲಾಸಫಿ' ಎಂಬ ಗೌರವ ಪದವಿಯನ್ನು ಸಲ್ಲಿಸಿತು. ಇದು ಕನ್ನಡ ಕಾರ್ಯಕ್ಕೆ ಸಂದ ಎರಡನೆಯ ಡಾಕ್ಟರೇಟ್ ಪದವಿಯಾಗಿತ್ತು. ಕನ್ನಡದಲ್ಲಿ ಆನಂತರ ಇಲ್ಲಿವರೆಗೆ ಅಂತಹ ಶಬ್ದಕೋಶವನ್ನು ರಚಿಸಲಾಗಿಲ್ಲ ಎಂಬುದು ಅದರ ಹಿರಿಮೆಯ ನಿದರ್ಶನವಾಗಿದೆ.

**ಕನ್ನಡ ವ್ಯಾಕರಣ ಕೃತಿ**

ಕಿಟೆಲ್ ಕನ್ನಡದ ವ್ಯಾಕರಣದ ಕುರಿತಾಗಿಯೂ ಕೆಲಸ ಮಾಡಿದ್ದಾನೆ. ನಿಘಂಟು ರಚನೆಯ ಪೂರ್ವದಲ್ಲಿಯೇ ಕೇಶಿ ರಾಜನ ಶಬ್ದಮಣಿ ದರ್ಪಣದ ಅಧ್ಯಯನ, ಸಂಪಾದನೆಯ ಸಮಯದಲ್ಲಿ ಕಿಟೆಲ್ ಈ ವ್ಯಾಕರಣಕ್ಕೆ ಸಂಬಂಧಿಸಿದ ವಿಷಯವನ್ನು ಇಂಗ್ಲಿಷ್‌ನಲ್ಲಿ ಟಿಪ್ಪಣಿ ಮಾಡಿಕೊಂಡಿದ್ದು, ಅದನ್ನು ಪರಿಷ್ಕರಿಸಿ ೧೯೦೨ರಲ್ಲಿ ಪ್ರಕಟಿಸಲಾಯಿತು. ಇದರ ಒಂದು ಪ್ರತಿಯನ್ನು ಕಿಟೆಲ್‌ನ ವಿಳಾಸಕ್ಕೆ ಕಳುಹಿಸಿ ಕೊಟ್ಟಾಗ ಕುಟುಂಬ ಸಮೇತ ಆ ಕೃತಿಯನ್ನು ನೋಡಿ ಸಂತೋಷಪಟ್ಟು, ಸುದ್ದಿಯನ್ನು ಬಾಸೆಲ್ ವರಿಷ್ಠ ಕೇಂದ್ರಕ್ಕೆ ತಿಳಿಸಿ ಪತ್ರ ಬರೆದಿದ್ದಾನೆ. ಮರುದಿನ ತಿರುಗಾಡಿ ಬಂದು ದೇಹಾಲಸ್ಯವುಂಟಾಗಿ ಇಹಲೋಕ ತ್ಯಜಿಸಿದ.

ನಾಲ್ಕು ದಶಕಗಳ ಕಾಲ ಕನ್ನಡ ನಾಡಿನಲ್ಲಿದ್ದು, ಕನ್ನಡ ಭಾಷೆಯನ್ನು ಪುನರುಜ್ಜೀವನ ಗೊಳಿಸಿ, ತನ್ಮೂಲಕ ಕನ್ನಡ ನಾಡು ನುಡಿಗೆ ಅಪಾರವಾದ ಕೊಡುಗೆಯನ್ನು ಸಲ್ಲಿಸಿದ ಕಿಟೆಲ್‌ನ ಕಾರ್ಯ ಮತ್ತು ಹೆಸರು ಪ್ರಪಂಚದಲ್ಲಿ ಕನ್ನಡದ ಸೊಲ್ಲು ಕೇಳಿ ಬರುವ ಪರ್ಯಂತ ಅಜರಾಮರ.

ಹೀಗೆ ಹತ್ತೊಂಬತ್ತನೆಯ ಶತಮಾನದ ಹೊಸಗನ್ನಡದ ಅರುಣೋದಯಕ್ಕೆ ಶ್ರೀಕಾರ ಬರೆಯುವಲ್ಲಿ ಕ್ರೈಸ್ತ ಸಾಹಿತ್ಯದ ಪಾತ್ರವನ್ನು ಅತ್ಯಂತ ಆಳವಾಗಿ ಅಧ್ಯಯನ ಮಾಡಿದ ಡಾ. ಹಾವನೂರರು ಸಂಶೋಧನಾ ವಲಯಕ್ಕೆ ಬಹುದೊಡ್ಡ ಕಾಣಿಕೆಯನ್ನು ನೀಡಿದ್ದಾರೆ.

## ಕಂಪ್ಯೂಟರ್

ಡಾ। ಹಾವನೂರರ ಸಂಶೋಧನಾ ದೃಷ್ಟಿ ಬಹುಮುಖತೆಯನ್ನು ಪಡೆದುಕೊಂಡಿದ್ದು ಆಧುನಿಕ ಉಪಕರಣವಾದ ಗಣಕ ಯಂತ್ರದ ಕಡೆಗೂ ಅದು ಹರಿದಿತ್ತು. ಅತ್ಯಂತ ಕಡಿಮೆ ಅವಧಿಯಲ್ಲಿ ಕೆಲವೇ ಜನಗಳ ಪಾಲ್ಗೊಳ್ಳುವಿಕೆಯಿಂದ ಅತ್ಯಂತ ನಿಖರವಾದ ಫಲಿತಾಂಶವನ್ನು ಕಂಪ್ಯೂಟರ್ ನೀಡಬಲ್ಲದು ಎಂಬ ಅಂಶ ಮನವರಿಕೆಯಾದೊಡನೆ ಕಾರ್ಯಪ್ರವೃತ್ತರಾದ ಹಾವನೂರರು ಇದನ್ನು ಸಾಹಿತ್ಯದ ಅಭ್ಯಾಸಕ್ಕೂ ಬಳಸಬಹುದು ಎಂದು ಸಾಧಿಸಿ ತೋರಿಸಿದ್ದು ಸಾಹಿತ್ಯ ಸಂಶೋಧನಾ ವಲಯದಲ್ಲಿ ಹೊಸ ಸಾಧ್ಯತೆಯ ಬೆಳಕನ್ನು ಹರಿಸಿತು. ಮತ್ತು ಆ ಮೂಲಕ ಅನುಪಮವಾದ ಕೊಡುಗೆಯನ್ನು ಕನ್ನಡ ಸಾಹಿತ್ಯ ಸಂಶೋಧನೆಗೆ ಕಟ್ಟಿಕೊಟ್ಟರು.

ಸಾಹಿತ್ಯ ಸಂಶೋಧನೆಗೆ ಕಂಪ್ಯೂಟರನ್ನು ಬಳಸಬಹುದು ಎಂಬ ಯೋಚನೆ ಡಾ। ಹಾವನೂರರಿಗೆ ಹೊಳೆದದ್ದು ೧೯೭೩ರಲ್ಲಿ ಅವರು ಮುಂಬೈಯ ಟಾಟಾ ಇನ್ಸ್‌ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್‌ನಲ್ಲಿ ಗ್ರಂಥಪಾಲಕರಾಗಿದ್ದಾಗ. ಅಲ್ಲಿಯ ಸಂಶೋಧನಾ ವಿದ್ಯಾರ್ಥಿಗಳು ವೈಜ್ಞಾನಿಕ ಸಂಶೋಧನೆಯಲ್ಲಿ ನಿರತರಾಗಿದ್ದಾಗ ವೈಜ್ಞಾನಿಕ ಮಾಹಿತಿಯ ಪೃಥಕ್ಕರಣ, ವಿಶ್ಲೇಷಣೆ, ಪದಪ್ರಯೋಗ ಕೋಶಗಳ ತಯಾರಿಕೆ ಮುಂತಾದ ಕೆಲಸಗಳಿಗೆ ಕಂಪ್ಯೂಟರನ್ನು ಬಳಕೆ ಮಾಡುತ್ತಿದ್ದರು. ಇದನ್ನು ಗಮನಿಸುತ್ತಿದ್ದಂತೆ ಹಾವನೂರರಿಗೂ ಹೊಸ ಯೋಚನೆಗಳು ಮೂಡಲಾರಂಭಿಸಿ ಸಾಹಿತ್ಯ ಸಂಶೋಧನೆಗೂ ಕಂಪ್ಯೂಟರ್

ಬಳಕೆಯ ಬಗ್ಗೆ ಯೋಚಿಸಲಾರಂಭಿಸಿದರು. ಕೀಟ್ಸ್ ಕವಿಯ ಕೃತಿಗಳನ್ನೆಲ್ಲಾ ಕಂಪ್ಯೂಟರಿಗೆ ಹಾಕಿ ಅವನು ಬಳಸಿದ ಶಬ್ದಗಳ ಸಹಾಯದಿಂದ ಅವನ ಪ್ರಿಯವಾದ ಬಣ್ಣವನ್ನು ಪತ್ತೆಹಚ್ಚಿದ ವಿಷಯ, ಎಮಿಲಿ ಡಿಕಿನ್ಸನ್ ಎಂಬ ಇಂಗ್ಲಿಷ್ ಕವಯತ್ರಿಯ ಕವಿತೆಗಳ "ಶಬ್ಧಪ್ರಯೋಗ" ಕೋಶವನ್ನು ಪ್ರಕಟಿಸಿದ ಉದಾಹರಣೆಯು ಹಾವನೂರರ ಮುಂದಿತ್ತು ಇದೂ ಅವರಿಗೆ ಪ್ರೇರಣೆಯನ್ನು ಒದಗಿಸಿತು. ಹಾವನೂರರು ಕೈಗೊಂಡ ಕೆಲಸ ಸುಲಭಸಾಧ್ಯವಾದುದೇನು ಆಗಿರಲಿಲ್ಲ. ಏಕೆಂದರೆ ಆ ವೇಳೆಗೆ ಕಂಪ್ಯೂಟರ್‌ನಲ್ಲಿ ಕನ್ನಡ ಲಿಪಿಯನ್ನು ಬಳಸುವ ತಂತ್ರಾಂಶ ಇನ್ನೂ ಸಿದ್ಧವಾಗಿರಲಿಲ್ಲ. ಕೇವಲ ಡಿ.ಟಿ.ಪಿ ಮತ್ತು ಮುದ್ರಣ ಕೆಲಸಕ್ಕಾಗಿ ಕನ್ನಡದ ಬಳಕೆ ಆಗ ತಾನೆ ಆರಂಭವಾಗಿದ್ದಿತು. ಅಭ್ಯಾಸದ ಕೆಲಸಕ್ಕೆ ಪ್ರಯೋಜನವಾಗಬೇಕಾದರೆ ನಮಗೆ ಬೇಕಾದ ಹಾಗೆ ಮಾಹಿತಿಯನ್ನು ಕಂಪ್ಯೂಟ್‌ನಿಂದ ಮರಳಿ ಪಡೆಯುವುದಕ್ಕೆ ಸೂಕ್ತವಾದ ಪ್ರೋಗ್ರಾಮ್ ರೂಪಿಸಬೇಕು. ಈ ಹಿನ್ನೆಲೆಯಲ್ಲಿ ಸುಮಾರು ೩೫ ವರ್ಷಗಳ ಕಾಲ ಡಾ। ಹಾವನೂರರು ನಡೆಸಿದ ಚಿಂತನ ಮಂಥನ ಕೈಗೊಂಡ ಪ್ರಯೋಗಗಳು ಹಲವಾರು. ಕಡೆಗೂ ಹೊಸ ಸಾಧ್ಯತೆಯನ್ನು ತೋರಿಸುವಲ್ಲಿ ಯಶಸ್ವಿಯಾದರು. ಕನ್ನಡದ ಶಿಕ್ಷಣ, ಭಾಷೆ, ಇತಿಹಾಸ ಮತ್ತು ಸಾಹಿತ್ಯದ ವ್ಯಾಸಂಗಕ್ಕೆ ಕಂಪ್ಯೂಟರನ್ನು ಬಳಕೆ ಮಾಡುವ ದಾರಿಯನ್ನು ಕಂಡುಕೊಂಡರು.

**ಡಾ। ಹಾವನೂರರು ಕಂಡುಕೊಂಡಂತೆ ಸಾಹಿತ್ಯದಲ್ಲಿ ಕಂಪ್ಯೂಟರ್**

ನಮ್ಮಲ್ಲಿ ಹಲವು ವಿಷಯಗಳಿಗೆ ಸಂಬಂಧಿಸಿದಂತೆ ಅಪಾರವಾದ ಪುಸ್ತಕ ಸಂಗ್ರಹಿಸಬಹುದು. ಆದರೆ ಬೇಕಾದ ಸಂದರ್ಭದಲ್ಲಿ ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದ ಸಾಮಾಗ್ರಿಗಳನ್ನು, ವಿವರಗಳನ್ನು ಪಡೆದುಕೊಳ್ಳುವುದು ಕಷ್ಟವಾಗಬಹುದು. ಒಂದೊಮ್ಮೆ ಕಂಪ್ಯೂಟರಿನಲ್ಲಿ ಅದೆಲ್ಲವನ್ನು ಹಿಡಿದಿಟ್ಟರೆ ಸಮಸ್ತ ದಾಖಲೆಗಳನ್ನು ವಿವರಗಳನ್ನು ಒಮ್ಮೆಲೆ ಒಂದೇ ಕಡೆಯಲ್ಲಿ ತಕ್ಷಣ ಪಡೆಯಬಹುದು ಎಂದು ಹಾವನೂರರ ಅಭಿಮತ.

ವೇದೋಪನಿಷತ್ತುಗಳು, ಮಹಾಕಾವ್ಯಗಳು, ಭಗವದ್ಗೀತೆ, ಬ್ರಹ್ಮಸೂತ್ರ, ಪುರಾಣಗಳು ನಮ್ಮ ವ್ಯಾಸಂಗದ ತವನಿಧಿಗಳಾಗಿದ್ದು. ಅನೇಕ ಸಂದರ್ಭದಲ್ಲಿ ಅದರ ಸಹಾಯ ನಮಗೆ ಬೇಕಾಗುತ್ತದೆ. ಆದರೆ ಬೃಹದ್ಗ್ರಂಥದಿಂದ ನಮಗೆ ಬೇಕಾದ ಮಾಹಿತಿಯನ್ನು ಹುಡುಕುವುದು ಕಷ್ಟಸಾಧ್ಯ. ಕಂಪ್ಯೂಟರ್ ಸಹಾಯದಿಂದ ಪದಪ್ರಯೋಗ ಕೋಶವನ್ನು ರಚಿಸಿಕೊಂಡರೆ ನಮ್ಮ ಕೆಲಸ ಸುಲಭವಾಗುತ್ತದೆ. ಇಲ್ಲಿ ಗ್ರಂಥವೊಂದರಲ್ಲಿ ಬರುವ ಶಬ್ದಗಳನ್ನು ಹೊಂದಿಸಿಕೊಂಡಿರುವುದು. ವೇದದಲ್ಲಿ 'ಮಾ' ಎಂಬ ನಿಷೇದಾರ್ಥಕ ಶಬ್ದ ಹೆಚ್ಚು ಬಂದಿರುವುದರಿಂದ ವೇದಗಳದ್ದು ಅಧಿಕಾರವಾಣಿ ಎಂದು ಸಿದ್ಧವಾಗಿದೆ. ಕಂಪ್ಯೂಟರ್‌ನ ಸಹಾಯದಿಂದ ಪದಪ್ರಯೋಗಕೋಶವನ್ನು ರಚಿಸುವುದೂ ಕೂಡಾ ಎಷ್ಟು ಸುಲಭಸಾಧ್ಯ ಎಂಬುದಕ್ಕೆ ಹಾವನೂರರು ತಮ್ಮ ಸ್ವಂತ ಉದಾಹರಣೆಯನ್ನು ನೀಡಿದ್ದಾರೆ. ಈ ಹಿಂದೆ ಕನ್ನಡದಲ್ಲಿ ಎರಡು ಪದ ಪ್ರಯೋಗ ಕೋಶ ರಚಿತವಗಿತ್ತು. ಒಂದು ಬಸವಣ್ಣನವರ ವಚನಗಳ ಪದಪ್ರಯೋಗಕೋಶ ೧೯೬೭ರಲ್ಲಿ ರಚಿತವಾದ್ದು, ಇನ್ನೊಂದು ತೋಂಟದ ಸಿದ್ಧಲಿಂಗರತಿಯರದ್ದು ಇದು ಎರಡೂ ಕೂಡಾ ಕೈಯಿಂದ ಅಂದರೆ ಪ್ರತಿಯೊಂದು

ಪದವನ್ನು ಅದು ಎಷ್ಟು ಸಲ ಬಂದಿದೆಯೋ ಆವೆಲ್ಲ ಸಾಲುಗಳನ್ನು ಹೆಕ್ಕಿ ತೆಗೆದು ಕೈಯಿಂದ ಬರೆದುಕೊಂಡು ಜೋಡಿಸಿಕೊಂಡದ್ದು. ಇದಕ್ಕೆ ಅಪಾರವಾದ ಶ್ರಮ, ಸಮಯ, ತಾಳ್ಮೆಯ ಅಗತ್ಯವಿದೆ. ಬಸವಣ್ಣನವರ ವಚನಗಳ ಕೋಶ ತಯಾರಿಸಲು ಏಳು ವರ್ಷ ಬೇಕಾಗಿದೆ ಯಂತೆ. ಆದರೆ ಹಾವನೂರರು ಕಂಪ್ಯೂಟರ್ ಸಹಾಯದಿಂದ 'ಜೇಡರ ದಾಸಿಮಯ್ಯ' ಪದ ಪ್ರಯೋಗ ಕೋಶವನ್ನು ಕೇವಲ ಒಂದು ತಿಂಗಳ ಸಮಯದಲ್ಲಿ ಸಿದ್ಧಪಡಿಸಿದರು. ಹಾವನೂರರ ಪ್ರಕಾರ ಹೀಗೆ ಯಾರೊಬ್ಬ ಕವಿಯ ಶಬ್ದಗಳನ್ನು ಪ್ರಯೋಗ ವಾಕ್ಯದೊಂದಿಗೆ ಪಟ್ಟಿಮಾಡಿಕೊಂಡರೆ. ಆ ಕಾವ್ಯದ ಅಭ್ಯಾಸವು ಹೆಚ್ಚು ಪರಿಪೂರ್ಣವಾಗುತ್ತದೆ. ನಿಸರ್ಗವರ್ಣನೆ, ದೈವಭಕ್ತಿ ಸಾಮಾಜಿಕ ಪ್ರಜ್ಞೆ ಪಾತ್ರಪೋಂದರ ಲಕ್ಷಣ ಮುಂತಾದ ಅಂಶಗಳನ್ನು ಎತ್ತಿಕೊಂಡು ಅಭ್ಯಾಸಿಸುವುದಿದ್ದಾಗ ಅವನ್ನು ಸೂಚಿಸುವಂಥ ಶಬ್ದಗಳನ್ನು ಕಂಪ್ಯೂಟರ್ ತೋರಿಸಿಕೊಟ್ಟ ಅಕಾರಾದಿ ಪದ ಪ್ರಯೋಗ ಕೋಶದಲ್ಲಿ ನೋಡಿದರಾಯಿತು.

**ಕಂಪ್ಯೂಟರ್ ಕಿಟಕಿಯಲ್ಲಿ ಹಾವನೂರರು ಕಂಡ ಮುದ್ದಣ**

ಕವಿ ಮುದ್ದಣ ಬರೆದಿರುವ ಮುಖ್ಯ ಕೃತಿಗಳು ಶ್ರೀರಾಮ ಪಟ್ಟಾಭಿಷೇಕ, ಅದ್ಭುತ ರಾಮಾಯಣ ಹಾಗೂ ಶ್ರೀರಾಮಾಶ್ವಮೇಧ. ಇವೆಲ್ಲವು ರಾಮನ ಹೆಸರಿನಿಂದಲೇ ಆರಂಭವಾಗುತ್ತಿದ್ದು ರಾಮ ಮುದ್ದಣನ ಪ್ರಿಯವಾದ ದೇವರು ಎಂದು ಮೇಲ್ನೋಟಕ್ಕೆ ಅನ್ನಿಸುತ್ತದೆ. ಆದರೆ ಡಾ.ಹಾವನೂರರು ಮುದ್ದಣನ ಕೃತಿಗಳನ್ನು ಕಂಪ್ಯೂಟರಿಗೆ ಉಣಿಸಿದಾಗ ಸತ್ಯ ಬೇರೆಯೇ ಆಗಿತ್ತು. ಅಲ್ಲಿ ೩೦೫ ಬಾರಿ ಶಿವ ನಾಮವಿದ್ದರೆ ೧೯೧ ಬಾರಿ ರಾಮ ನಾಮವಿದೆ. ಉಳಿದಂತೆ ಬ್ರಹ್ಮ ೧೦೩, ಇಂದ್ರ ೧೪೯, ಹರಿ ೧೪೯ ಸಲ ಅಲ್ಲದೆ ಈತ ಸ್ತುತಿಸುವ ಶಿವ ಲಯಕಾರಿ ಶಿವನಲ್ಲ ಮಂಗಳಕಾರಿ ಶಿವನಾಗಿದ್ದಾನೆ. ಇದರಿಂದ ಮುದ್ದಣನ ಆರಾಧ್ಯದೈವ ಶಿವ ಎಂಬುದು ಸಾಬೀತಾಗಿದೆ. ಇದಲ್ಲದೆ ಉಳಿದಂತೆ ಕಂಡುಕೊಂಡ ವಿಚಾರಗಳು ಈ ರೀತಿಯಾಗಿದೆ.

ಈತನ ಆರಾಧ್ಯ ದೈವ ಶಿವನ ಹಣೆಯಲ್ಲಿರುವ ಮೂರನೆಯ ಕಣ್ಣಿಗಾಗಿಯೇ ಅನಲೇಕ್ಷಣ, ಕೃಶಾನುನೇತ್ರ, ತ್ರಿಲೋಚನ, ನಿಟಲನಯನ, ನೀಲಲೋಹಿತ, ಫಾಲಾಕ್ಷ, ಭಾಳಾಕ್ಷ, ರಂಗತ್ರಿಣೇತ್ರ ಮುಂತಾದ ಹೆಸರುಗಳಿಂದ, ಜೊತೆಗೆ ಉರಿಗಣ್ಣ, ನೊಸಲ ಪಣೆಗಣ್ಣ ಎಂಬ ಅಚ್ಚಕನ್ನಡ ಶಬ್ದಗಳಿಂದ ಕರೆದರೆ ಕಾಮಧ್ವಂಸಿಯೆಂಬುದನ್ನು ಅಂಗಜಾರಿ, ಕಂತುವೈರಿ, ಕಾಮರಾತಿ, ಜಿತಮದನ, ಚಿತ್ತಜಾರಿ ಸ್ಮರಹರಣ, ಹರಿಸುತಾಹಿತವೆಂಬ ಹೆಸರಿನಿಂದ ಕರೆದಿದ್ದಾನೆ. ಶಿವನನ್ನು ಐಗಳ, ಐಮೊಗ ಪಂಚವದನನೆಂದೂ, ಅಷ್ಟಮೂರ್ತಿ, ಎಣ್ಮೆಯ್ಯವ ಎಂದೂ ಕರೆದಿದ್ದಾನೆ.

ಶಿವನ ಕುತ್ತಿಗೆಯು ಕಾಲಕೂಟ ವಿಷಕ್ಕಾಗಿ ಕಂದುಗೊರಲ ನೀಲಕಂದರ, ನಂಜುಂಡ, ಶಿತಿಕಂಠ ಎಂಬ ಪದಗಳನ್ನು ಬಳಕೆ ಮಾಡಿದ್ದಾನೆ. ಶಿವನ ಶಿರೋಭೂಷಣಗಳಾದ ಅರ್ಧಚಂದ್ರ ಹಾಗೂ ಗಂಗಾಸಲಿಲ ಇವುಗಳಿಗೆ ಅರೆದಿಂಗಳ, ಗಂಗೊತ್ತಮಾಂಗ ತೊರೆದಲೆಯ, ವಿಧುಲಾಂಛನ ಎಂಬ ಪದವನ್ನು ಬಳಸಿದ್ದಾನೆ. ಸರ್ಪಭೂಷಣನಾದ ಶಿವನನ್ನು ಅಹೀನಾಲಂಕೃತಾಂಗ, ದ್ವಿಜರಾಜಧರ, ಫಣಿಕುಂಡಲ, ಭುಜಗತತಿ ಭೂಷ ಎಂದೂ

ಹೀಗೆ ಹಲವು ಹೆಸರುಗಳಿಂದ ಕರೆದದ್ದು ಅರಿವಿಗೆ ಬಂದಿದೆ.

ಮುದ್ದಣನ ಶಿವಭಕ್ತಿಗೆ ಇನ್ನಷ್ಟು ಉದಾಹರಣೆಗಳನ್ನು ಹಾವನೂರರು ಕಂಡುಕೊಂಡಿದ್ದಾರೆ. ಈತನ ಕಾವ್ಯಾರಂಭದ ದೇವತಾಸ್ತುತಿಯಲ್ಲಿ ಶಿವನಿಗೆ ಆದ್ಯತೆಯನ್ನು ನೀಡಿದ್ದಾನೆ. ಉದಾ: 'ಹರಿಗಿರಿಜೆಯವರಿಗೆ ಎರಗಿ' ಪುರಹರನ ಕೃಪೆಯಿಂದ ಮುಂಗಥೆಯನ್ನು ವರ್ಣಿಪೆ ಮುಂತಾಗಿ ಕೃತಿಯನ್ನಾರಂಭಿಸಿದ್ದಾನೆ.

ಮುದ್ದಣನ ಕೃತಿಗಳಲ್ಲಿ ಬರುವ ಮುಕ್ಕಾಲು ಪಾಲು ಜನರು ಶಿವಭಕ್ತರು. ಹರಿಭಕ್ತನಾದ ನಾರದನೂ ಕೂಡಾ ಶಿವಸ್ಮರಣೆ ಮಾಡುವವನಾಗಿದ್ದಾನೆ. ದೇವೇಂದ್ರ ಶಚಿಯವರೂ ಕೂಡಾ ಇಂದ್ರಾಣಿಯನ್ನು ರಾಕ್ಷಸ ಪದ್ಮಾಸುರನು ಅಪಹರಿಸಿದಾಗ, ಮಗ ಜಯಂತ ಅಮರಾವತಿಯಲ್ಲಿ ಸೆರೆಯಾದಾಗ ಅನ್ಯಥಾ ಶರಣಂ ನಾಸ್ತಿ ಎಂಬಂತೆ ಶಿವಧ್ಯಾನದಲ್ಲಿ ನಿರತರಾಗುತ್ತಾರೆ. ಮುದ್ದಣನು ಕೈಕೇಯಿಯನ್ನು ಶಿವಭಕ್ತೆಯನ್ನಾಗಿ ಮಾಡಿದ್ದಾನೆ. ಶ್ರೀ ಹರಿಯ ಸುದರ್ಶನ ಮುದ್ದಣನ ಕೃತಿಯಲ್ಲಿ ರುದ್ರಾನುಗ್ರಹದಿಂದ ದೊರೆತುದು. ಶ್ರೀರಾಮನು 'ಇಂದು ಶೇಖರನ ಕೃಪೆ ಮೊದಲು ಎಮ್ಮೊಳಾಯ್ತು' ಎನ್ನುತ್ತಾನೆ. ಇನ್ನು ವಾಲ್ಮೀಕಿ ಮುನಿಯನ್ನು ವರ್ಣಿಸುವ ಪ್ರಸಂಗದಲ್ಲಿ ಮುದ್ದಣನಿಗೆ ಶಿವನ ವೇಶ ಭೂಷಣಗಳೇ ಹೋಲಿಕೆಯಾಗಿ ದೊರೆತವು. ಹೀಗೆ ಕಂಪ್ಯೂಟರ್‌ನ ಸಹಾಯದಿಂದ ಹಾವನೂರರು ಮುದ್ದಣನ ಕೃತಿಯ ನಿಜಾಂಶವನ್ನು ಕಂಡುಹಿಡಿದಿದ್ದಾರೆ.

ತಾವೂ ಕಂಪ್ಯೂಟರ್ ಬಳಸಿ ಹೊಸತನ್ನು ಕಂಡುಕೊಂಡದ್ದು ಮಾತ್ರವಲ್ಲದೆ ತಮ್ಮ ಕೈಕೆಳಗೆ ನೋಂದಾಯಿಸಿದ ಶಿಷ್ಯರಿಂದ ಪಿ.ಹೆಚ್.ಡಿ ಪದವಿ ಪಡೆಯಲು ಬೇಕಾದ ಸಂಶೋಧನೆಯನ್ನೂ ಕಂಪ್ಯೂಟರ್ ಬಳಕೆಯ ಮೂಲಕ ಮಾಡುವಂತೆ ಮಾಡಿದ್ದಾರೆ. ಕಂಪ್ಯೂಟರ್ ಬಳಸಿ ತಯಾರಿಸಿದ ಮೊದಲ ಕನ್ನಡ ಪಿ.ಹೆಚ್.ಡಿಯನ್ನು ಹೊರತರುವಂತೆ ಮಾಡಿದ ಕೀರ್ತಿಯನ್ನು ಡಾ.ಹಾವನೂರರು ಪಡೆದುಕೊಂಡಿರುತ್ತಾರೆ.

## ದಾಸ ಸಾಹಿತ್ಯ

ಕನ್ನಡ ಸಾಹಿತ್ಯ ರಾಶಿಯ ತವನಿಧಿಗಳಲ್ಲೊಂದಾದ ದಾಸ ಸಾಹಿತ್ಯದ ಆಳಕ್ಕಿಳಿದು ಅಧ್ಯಯನ ನಡೆಸಿದ ಕೀರ್ತಿ ಡಾ। ಹಾವನೂರರದು. ದಾಸಸಾಹಿತ್ಯವನ್ನು ಸಮಗ್ರವಾಗಿ ಹೊರತರಬೇಕೆಂದು ಯೋಚಿಸಿದ ಶ್ರೀ ಪೇಜಾವರ ಶ್ರೀಗಳು, ಸಂಪಾದಕತ್ವದ ಹೊಣೆಗಾರಿಕೆಯನ್ನು ಹೊರಿಸಿದಾಗ, ಹಾವನೂರರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಶ್ರಯದಲ್ಲಿ ಸಮಿತಿಯೊಂದನ್ನು ರಚಿಸಿ ಅಹೋರಾತ್ರಿಯಾಗಿ ದುಡಿದು ೫೦ ಸಂಪುಟಗಳಲ್ಲಿ ೧೫ ಸಾವಿರ ಕೀರ್ತನೆಗಳನ್ನು ಸಂಗ್ರಹಿಸಿದರು. ಮಾತ್ರವಲ್ಲ ಇದನ್ನು ತಮ್ಮ ಕನಸಿನ ಕಂಪ್ಯೂಟರ್ ಸಂಶೋಧನೆಗೊಳಪಡಿಸಿ ಹಾಡುಗಳ ವಸ್ತು, ಸ್ಥಳ, ವಿಷಯ, ಅಂಕಿತ ಮುಂತಾದ ೮೦೦ಕ್ಕೂ ಹೆಚ್ಚು ವಿಷಯಗಳ ಅಡಿಯಲ್ಲಿ ವಿಂಗಡಿಸಿ ದಾಸಸಾಹಿತ್ಯದ 'ವಸ್ತುಕೋಶ' ಎನ್ನಬಹುದಾದ ಮಾಹಿತಿ ಮಾಲಿಕೆಯನ್ನೊದಗಿಸಿದ್ದಾರೆ. ಸು.೭೫೦ ಪುಟಗಳ

ಈ ಗ್ರಂಥವನ್ನು ತಿರುಪತಿ ದಾಸಸಾಹಿತ್ಯ ಪ್ರಾಜೆಕ್ಟಿನವರು ಪ್ರಕಟಿಸಿದ್ದಾರೆ. ಹಾವನೂರರು ದಾಸಸಾಹಿತ್ಯ ಸಂಶೋಧನೆಯಲ್ಲಿ ಕಂಡುಕೊಂಡ ಅಂಶಗಳನ್ನು ಈ ಭಾಗದಲ್ಲಿ ಚರ್ಚಿಸಲಾಗಿದೆ.

**ದಾಸಸಾಹಿತ್ಯದ ಪ್ರಮುಖ ವಿಷಯಗಳು**

ಶ್ರೀ ಹರಿಯ ಸ್ತುತಿ, ಶ್ರೀ ಹರಿಯ ಅವತಾರಗಳು, ದೇವತೆಗಳು / ಋಷಿಗಳು, ರುದ್ರದೇವರು, ಸ್ತ್ರೀದೇವತೆಗಳು, ಪೌರಾಣಿಕ ವ್ಯಕ್ತಿ ವಿಷಯಗಳು, ತೀರ್ಥಕ್ಷೇತ್ರಗಳು, ತತ್ವವಿಚಾರ-ಮುಂಡಿಗೆ, ಆತ್ಮನಿವೇದನೆ, ಲೋಕನೀತಿ/ನೀತಿಬೋಧೆ, ಗುರುನಮನ, ಮತಧರ್ಮಗಳು, ಪ್ರಾಪಂಚಿಕ, ಲೌಕಿಕ ವಿಷಯಗಳು, ಸಾಂಪ್ರದಾಯಿಕ ಹಾಡುಗಳು, ಸಾಹಿತ್ಯಿಕ ಮೌಲ್ಯದ ಕೀರ್ತನೆಗಳು.

**ಶ್ರೀ ಹರಿಯ ಸ್ತುತಿ**

ದಾಸಸಾಹಿತ್ಯದ ಉದ್ದಕ್ಕೂ ಭಕ್ತವತ್ಸಲನಾದ ಶ್ರೀಹರಿಯ ಭಕ್ತಿಗೀತೆಗಳೇ ಪ್ರಾಧಾನ್ಯತೆಯನ್ನು ಪಡೆದುಕೊಂಡಿದೆ. ಶ್ರೀ ಹರಿಯ ಛಾಯೆ ಇಲ್ಲದ ಕೀರ್ತನೆಗಳೇ ಇಲ್ಲ ಎನ್ನಬಹುದಾದ ರೀತಿಯಲ್ಲಿ ಆತನನ್ನು ಇಡಿಯಾಗಿ ಬಿಡಿಯಾಗಿ ಅಂದರೆ ಅಂಗಾಂಗಗಳ ಮೂಲಕ ಉಪಮಾ ರೂಪಕಗಳ ಮೂಲಕ ಹಾಡಿ ಪೊಗಳಿರುವುದನ್ನು ಕಾಣಬಹುದು.

ಉದಾಹರಣೆ "ಆನೆ ಬರುತಿದೆ ಎಲ್ಲರು ನೋಡಿರಿ"
"ಕುದುರೆ ಬಂದಿದೆ ಚೆಲುವ ಕುದುರೆ"
"ಮರಣ ತಪ್ಪಿಸಿ ಪಾರ್ಥನಿಗೆ ಕರ್ಣನ ನಾಚಿಸಿದ ಪಾದ"

**ಶಯನಗೀತೆ**

ದಾಸ ಸಾಹಿತ್ಯದ ವಿಶಿಷ್ಟ ರಚನೆಗಳಲ್ಲಿ ಶಯನಗೀತೆಯೂ ಒಂದಾಗಿದೆ. ಇಲ್ಲಿ ಶ್ರೀ ಹರಿಯ ನಿದ್ರಿಸಬೇಕಾದ ಸಮಯವನ್ನು ಕಲ್ಪಿಸಿ ಹಾಡಲಾಗಿದೆ. ವಿದ್ಯಾಪ್ರಸನ್ನರು ದೇವರನ್ನು ಮಗುವಾಗಿ ಕಲ್ಪಿಸಿ, ಲಾಲಿಹಾಡಿ, ಕತೆ ಹೇಳಿ, ಚುಕ್ಕು ಬಡಿದು ಮಲಗಿಸುವ ಹಾಡು ಅಪೂರ್ವ ಕಲ್ಪಕತೆಗೆ ಸಾಕ್ಷಿಯಾಗಿದೆ.

**ದಶಾವತಾರ**

ಪತ್ತವತಾರವನ್ನೆತ್ತಿದ ಶ್ರಿ ಹರಿಯ "ಭೂಭಾರ ಹರಣ' ಕತೆಯನ್ನು ನಾವು ಕೇಳಿದ್ದೇವೆ. ಇದನ್ನು ಅತ್ಯಂತ ಮನೋಜ್ಞವಾಗಿ ಹರಿದಾಸರ ದಾಸ ಸಾಹಿತ್ಯದಲ್ಲಿ ಕಾಣಬಹುದು. ಹಾವನೂರರ ಪ್ರಕಾರ ದಾಸ ಸಾಹಿತ್ಯದ ಮೌಲ್ಯ ಮಾಪನಕ್ಕೆ ಈ ದಶಾವತಾರದ ವರ್ಣನೆಯೇ ಸಾಕು. ಈ ದಶಾವತಾರದ ಕೀರ್ತನೆಗಳು ೧೦-೧೫ ನುಡಿಗಳದ್ದು ೩-೫ ನುಡಿಗಳದ್ದು ಅಥವಾ ೧ ನುಡಿಯದ್ದೂ ಇದೆ.

ಶ್ರೀ ವಾದಿರಾಜರಿಗಂತೂ ದಶಾವತಾರ ವಿಷಯವು ಅತ್ಯಂತ ಪ್ರಿಯವಾಗಿದ್ದು ಹತ್ತಾರು

ಕಡೆ ಬಳಸಿದ್ದಾರೆ. ಪುರಂದರ ದಾಸರು ಒಂದು ಕಡೆ 'ಎಲ್ಲೋ ಎಲ್ಲೋ ಎನ್ನ ಸಾಲ ತೀರಿಸದೆ, ನಿಲ್ಲೊ ನಿಲ್ಲೊ ನಿನ್ನ ಕಂಡ ಮ್ಯಾಲೆ ಬಿಡೆ; ಮೀನು ನಡೆದ ಹಾಗೆ ಹೆಜ್ಜೆ ಇಡ್ತೀಯ' ಎಂದು ಹಾಡಿದ್ದಾರೆ. ಇಲ್ಲಿ ವಿವಿಧ ಅವತಾರವನ್ನೆತ್ತಿದ ಭಗವಂತನನ್ನು ವೇಷ ಬದಲಿಸಿ ಸಂಚರಿಸುವ ಕಳ್ಳನ ಹಾಗೆ ಚಿತ್ರಿಸಿದ್ದಾರೆ.

ದಶಾವತಾರಗಳಲ್ಲಿ ಕೃಷ್ಣವತಾರಕ್ಕೆ ಹೆಚ್ಚಿನ ಮಹತ್ವವಿದ್ದು ಬಾಲಲೀಲೆಯ ಕುರಿತಾದ ಹಾಡುಗಳು ತುಂಬಾ ಹೃದ್ಯವಾಗಿದೆ. ಉಡುಪಿಯ ಕೃಷ್ಣನ ಕುರಿತಾದ ಕೀರ್ತನೆಗಳು ವೈವಿಧ್ಯಮಯಯವಾಗಿದ್ದು ಇದು ಶ್ರೀಪಾದರಾಜರ ಕಾಲದಿಂದಲೇ ಆರಂಭವಾಗಿದೆ. ವ್ಯಾಸರಾಯರಂತೂ ಸಿರಿಕೃಷ್ಣ ಎಂದೇ ಅಂಕಿತವನ್ನು ಇಟ್ಟುಕೊಂಡಿದ್ದರು. ಪುರಂದರ–ಕನಕದಾಸರಂತೂ ಉಡುಪಿ ಕೃಷ್ಣನ ಅನನ್ಯ ಭಕ್ತರು. ಇನ್ನು ಪ್ರಸನ್ನ ವೆಂಕಟದಾಸರು, ವಿಜಯದಾಸರು, ಗೋಪಾಲದಾಸರು, ಶ್ರೀಪಾದರಾಜರು, ಶ್ರೀವಾದಿರಾಜರು, ಸೋದೆಯ ವಿಶ್ವೇಂದ್ರತೀರ್ಥರು, ಮುಂತಾದ ಹರಿದಾಸರು ರಚಿಸಿದ ಕೃಷ್ಣ ಗೀತೆಗಳು ಅತ್ಯಂತ ಹೃದಯಂಗಮವಾಗಿದೆ.

### ರುದ್ರದೇವರು, ಇತರ ದೇವರು

ಹರಿದಾಸರು ಹರಿನಾಮಸ್ಮರಣೆಗೆ ಹೆಚ್ಚಿನ ಮಹತ್ವವನ್ನು ಕೊಟ್ಟಿರುವುದು ಹೌದಾಗಿದ್ದರೂ, ಇತರ ದೇವರುಗಳನ್ನು ಕಡೆಗಣಿಸಿಲ್ಲ. ಅದರಲ್ಲಿ ರುದ್ರದೇವನನ್ನು ಮುಕ್ಕಾಲುವಾಸಿ ಹರಿದಾಸರು ಸ್ಮರಿಸಿದ್ದಾರೆ. ರುದ್ರಭಕ್ತರಿಗೆಲ್ಲಾ ಪರಮಗುರು ಸ್ಥಾನದಲ್ಲಿರುವ ಶ್ರೀಹರಿಯ ಕೃಪೆಯನ್ನು ರುದ್ರದೇವನ ಮೂಲಕವೇ ಪಡೆಯಬೇಕೆಂದು ಕೀರ್ತನೆಯ ಮೂಲಕ ಸಾರಿದ್ದಾರೆ.

ಉದಾ : 'ಧವಳಗಂಗೆಯ ಗಂಗಾಧರ ಮಹಲಿಂಗ ಮಾಧವನ ತೋರಿರಯ್ಯಾ'

ಹಾಗೆಯೇ ಷಣ್ಮುಖ, ಸುಬ್ರಹ್ಮಣ್ಯ, ದುರ್ಗಾದೇವಿ ಮಹಾಲಕ್ಷ್ಮಿಯರ ಕುರಿತಾದ ಕೀರ್ತನೆಗಳು ಸಾಕಷ್ಟಿವೆ.

### ಕ್ಷೇತ್ರದರ್ಶನ

ತೀರ್ಥಕ್ಷೇತ್ರ ದರ್ಶನ  ಹರಿದಾಸರ ಅತ್ಯಂತ ಒಲವಿನ ವಿಷಯವಾಗಿತ್ತು. ಹಾಗೆ ದರ್ಶಿಸುವಾಗ ಆಯಾ ಕ್ಷೇತ್ರದ ದೇವರು, ಗುರುವೃಂದಾವನಗಳು, ನದ–ನದಿಗಳು, ಇವುಗಳ ಕುರಿತಾದ ಆಶುಕೀರ್ತನೆಗಳನ್ನು ರಚಿಸಿದ್ದಾರೆ. ಹೀಗೆ ತೀರ್ಥಕ್ಷೇತ್ರ ಪರ್ಯಟನೆ ಮಾಡಿ ಶ್ರೀವಾದಿರಾಜರು 'ತೀರ್ಥಪ್ರಬಂಧ' ಎಂಬ ಗ್ರಂಥವನ್ನು ಬರೆದಿದ್ದಾರೆ.

### ಆತ್ಮನಿವೇದನೆ

ಆತ್ಮನಿವೇದನೆಯು ಹರಿದಾಸ ಸಾಹಿತ್ಯದ ಪ್ರಮುಖವಾದ ಭಾಗ. ಹಾಗೆ ನೋಡಿದರೆ ಶ್ರೀ ಹರಿಯ ಸ್ತುತಿಯ ಅನಂತರ ಇದಕ್ಕೆ ಹೆಚ್ಚಿನ ಪ್ರಾಶಸ್ತ್ಯ. ಇಲ್ಲಿ ತನ್ನೊಳಗೆ ತಾ ಹೊಕ್ಕು ತನ್ನನ್ನೇ ತಾ ಕಾಣುವ ಭಾವವಿದೆ. ಸಂಸಾರದ ಮೋಹದೊಳಗೆ ಸಿಲುಕಿ ಪರಮಾತ್ಮನ

ಮರೆತ ಪಶ್ಚಾತ್ತಾಪ, ಸರ್ವಶಕ್ತ ಭಗವಂತನಿಗೆ ಶರಣಾಗತಿ, ಸರ್ವಸಮರ್ಪಣಾ ಭಾವ ಪಡಿಮೂಡಿದೆ. ಕೆಲವು ಉದಾಹರಣೆಗಳು ಈ ಕೆಳಗಿನಂತಿದೆ.

**ಸಮರ್ಪಣಾ ಭಾವ**

ಜನನಿ ಜನಕ ಗೃಹ ವನಿತೆ ಒಡವೆ ಭೂಮಿ ಧನ ವಸ್ತ್ರ ಧಾನ್ಯಗಳು, ನಾನಾವಿಧ ಸಂಪದವು ತನುಮನಗಳೊಡಗೂಡಿ ಮನ್ಮಥ ನಿನ್ನಗೊಪ್ಪಿದ ನಿರಂತರ ನೆನೆವೆ.

**ತಪ್ಪೊಪ್ಪಿಗೆ**

"ಮಾಧವ ನಿನ್ನಯ ಮಹಿಮೆಯ ತಿಳಿಯದಪ/ರಾಧವ ಮಾಡಿದೆ ದಾರಿದ್ರ್ಯದ/
ಬಾಧೆಯಿಂದ ತವ ಪಾದ ದರುಶನದ/ ಹಾದಿಯ ಕಾಣದಾದೆ ನಾ ದ್ರೋಹಿಯಾದೆ"

**ಶರಣಾಗತಿ**

"ಆಡಿಸಿದರೆ ಆಡುವೆ, ನೋಡಿಸಿದರೆ ನೋಡುವೆ, ಮಾಡಿಸಿದರೆ ಮಾಡುವೆ ಪ್ರೇರಿಸಿದ್ದಾಂಗ. ನುಡಿಸಿದರೆ ನುಡಿವೆ ಚೇತರಿಸಿದ್ದಾಂಗ ಅಳಿಸಿದರೆ ಅಳುವೆ ಅನುವು ಆದ್ದಾಂಗ"

**ಸ್ಥಿತಪ್ರಜ್ಞತೆ**

"ನಾನಾ ಚಿಂತನೆ ಎನಗಿಲ್ಲ ಹರಿ!
ಉಪವಾಸ ಬಿದ್ದರೆ ಅಡ್ಡಿಯಿಲ್ಲ, ಅಪರೂಪದ ಊಟಾದರೆ ಹಿಗ್ಗಿಲ್ಲ"

**ಪ್ರಾಪಂಚಿಕ / ಲೌಕಿಕ ವಿಷಯಗಳು**

ಹರಿದಾಸರು ಲೌಕಿಕ ಜೀವನವನ್ನು ನಡೆಸಿದವರು, ಸಮಾಜವನ್ನು ಒಳಹೊಕ್ಕು ನೋಡಿದವರು; ಜೀವನವನ್ನು ಆಳವಾಗಿ ಅರ್ಥ ಮಾಡಿಕೊಂಡವರು. ಕೌಟುಂಬಿಕ ಜೀವನದ ಸುಖ-ದುಃಖ, ಮಾನ-ಅವಮಾನಗಳು ಅತ್ಯಂತ ಗಾಢವಾಗಿ ದಾಸ ಸಾಹಿತ್ಯದಲ್ಲಿ ಒಡಮೂಡಿದೆ. ಒಬ್ಬ ವ್ಯಕ್ತಿಯಾಗಿ ತಾನು ಬದುಕಿದ ಬದುಕನ್ನು ಪ್ರಾಮಾಣಿಕವಾಗಿಯೇ ಹಾಡಿನಲ್ಲಿ ಹೇಳಿಕೊಂಡಿದ್ದಾರೆ.

ಉದಾ : ಪಾವಂಜೆ ಲಕ್ಷ್ಮೀ ನಾರಾಯಣರು ಹೇಳಿದ ಒಂದು ಸ್ಥಿತಿಗತಿ ಹೀಗಿದೆ.

"ತ್ರಾಣವಿರುವಾಗ ದೇವರಿಗೆ ಕಾಣಿಕೆ ತೆಗೆದಿಟ್ಟೆ, ಮೇಣ್ ಅದರಿಂದ ತೆಗೆದು ಪ್ರಾಣಕ್ಕೆ ಆಹುತಿ ಕೊಟ್ಟೆ, ದೇವರ ಹೆಸರಿನಲ್ಲಿ ಪ್ರತಿ ಶನಿವಾರ ಒಪ್ಪೊತ್ತು ಊಟ ಮಾಡ್ತಿದ್ದೆ. ಜ್ವರ ಬಂದು ಊಟ ಸುರುವು ಮಾಡಿದೆ. ಜ್ವರ ನಿಂತ ಮೇಲೂ ಊಟವನ್ನು ಮುಂದುವರಿಸಿದೆ. ಹೀಗೆ ಹಣ ನನ್ನ ಗುಣವನ್ನು ನುಂಗಿತೆಂಬುದು ಪಾದಕ್ಕೆ ಗೊತ್ತು. ಆದ್ದರಿಂದ ದೇವರೇ ನನಗೆ ದೃಢ ಭಕ್ತಿಯನ್ನು ಕೊಡು".

**ಸಮಾಜದ ಮೇಲು ಕೀಳಿನ ಕುರಿತಾದ ಒಂದು ಹಾಡು**

"ಭಗವಂತನಲ್ಲಿ ಭಕುತಿಯುಳ್ಳ ಮಾದಿಗನು ಉತ್ತಮ / ನಗಧರನ ನೆನೆಯದಿಪ್ಪ ವಿಪ್ರ ಮಾದಿಗನಿಗಿಂತ ಕನಿಷ್ಠ"

**ಬರಗಾಲದ ಬವಣೆಯ ಸಂದರ್ಭದ ಒಂದು ಸೊಲ್ಲು**

"ಚಿನ್ನ ಚಿಗುರು ಕಂಚು ತಾಮ್ರ ನುಂಗಿತು. ಬಡವರನ್ನು ಬಲ್ಲಿದರನ್ನು ಸಹ ಬಿಡದಪ್ಪಿ ನುಂಗಿತು".

**ಲೋಕನೀತಿ, ನೀತಿ ಬೋಧನ**

ಆದರ್ಶದ ಉಪದೇಶವನ್ನು ಯಾರೂ ಕೊಡಬಹುದು. ಆದರೆ ಹಾಗೆ ನಡೆದು ತೋರಿಸುವುದು ಸುಲಭವಲ್ಲ. ಹರಿದಾಸರು ನುಡಿದಂತೆ ನಡೆದವರು, ನಡೆದಂತೆ ನುಡಿದವರು.ಆದ್ದರಿಂದಲೇ ಹರಿದಾಸ ಸಾಹಿತ್ಯದ ಲೋಕನೀತಿಗಳು ಮನಸ್ಸಿಗೆ ತುಂಬಾ ಹತ್ತಿರವಾಗುತ್ತವೆ. ಕೆಲವು ಉದಾಹರಣೆ ಇಲ್ಲಿವೆ.

- ಅತಿಥಿ ಬಂದು ಅನ್ನವ ಬೇಡಲು ಗತಿ ನಮಗಿಲ್ಲ ಎಂದು ಕೂಗದಿರಿ.
- ಅಪಮಾನವಾದರೆ ಒಳಿತು–ಅಪರೂಪದಿ ಹರಿನಾಮ ಜಪಿಸುವ ಮನುಜನಿಗೆ.
- ಹಳೆಯ ಜನರ ಅನುಭವ ಹಳಿಯಬೇಡಿರೋ.
- ಪರರ ಗೋಪ್ಯ ತಿಳಿದರೆ ಬಹಿರಂಗ ಬೇಡವೋ
- ಬಳಿಕ ಮಾತನಾಡುವವ ಗೆಳೆಯನಲ್ಲ.
- ಕುಳಿತು ತಿನ್ನುವವ ಸಾಹುಕಾರನಲ್ಲ.

**ಹರಿ–ಹರ ತುಲನೆ**

ದ್ವೈತ–ಅದ್ವೈತವೆಂದು ಹೊಡೆದಾಡದಿರೋ ಪ್ರಾಣಿ'– ಎಂಬ ವಿಜಯದಾಸರ ಬೋಧನೆ; 'ಸ್ಮಾರ್ತರನ್ನು ನಿಂದಿಸುವ ಕೆಟ್ಟ ದೂರ್ತರು'– ಎಂಬ ಗುರುರಾಮವಿಠಲರ ನಿಂದನೆ, ಗಂಧ ಹಚ್ಚಿರಿ ಎಂದು ಸ್ಮಾರ್ತರಿಗೂ, ವಿಭೂತಿ ಹಚ್ಚಿರಿ ಎಂದು ವೈಷ್ಣವರಿಗೂ ವರಾಹತಿಮ್ಮಪ್ಪರ ಉಪದೇಶ. ಇದೆಲ್ಲವೂ ದ್ವೈತ–ಅದ್ವೈತಗಳ ನಡುವಿನ ಅಭೇದ ಕಲ್ಪನೆಯ ಮಾತಾದರೂ. ದಾಸರು ಮಧ್ವಪಂಥಕ್ಕೆ ಹೆಚ್ಚಿನ ಒಲವು ತೋರಿಸಿದ್ದಾರೆ. ಹಾಗೆಯೇ ಹರಿ–ಹರರಿಬ್ಬರೂ ಸಮಾನರು ಎಂದು ಸಾರಿದರೂ ಶ್ರೀಹರಿಯೇ ಸರ್ವೋತ್ತಮನೆಂಬ ತೀರ್ಮಾನಕ್ಕೆ ಬರುವ ಕೀರ್ತನೆಗಳೇ ಅಧಿಕವಾಗಿದೆ.

**ಮುಂಡಿಗೆಗಳು**

'ಮುಂಡಿಗೆ' ಎಂದರೆ ದ್ವ್ಯರ್ಥವುಳ್ಳದ್ದು. ಅದರ ಮೇಲೆ ಕಾಣಿಸಿದ ಅರ್ಥ ತೇಲು ಮೇಲಿನದು, ಲೌಕಿಕ ಸ್ವರೂಪದ್ದು, ಹೀಗೂ ಉಂಟೆ ಎಂದು ಅಚ್ಚರಿಗೊಳಿಸುವಂತಹದು. ಉದಾ : 'ಶಿವಗಾಗಿ ಶಿವ ಬಂದ ಶಿವ ಕುಡಿದ / ಶಿವ ಕಡಿದ ಶಿವ ಸತ್ತ ಶಿವನ ಅರ್ಧಾಂಗಿ

/ ಶಿವ ಶಿವ ಎಂದಳು'

ಸಂಸ್ಕೃತದಲ್ಲಿ 'ಶಿವ' ಶಬ್ದಕ್ಕೆ ನೀರು, ನರಿ, ಸರ್ಪಗಳೆಂಬ ಅರ್ಥವಿದ್ದು, ಅದನ್ನು ಆರೋಪಿಸಿ ಈ ಪದ್ಯವನ್ನು ರಚಿಸಲಾಗಿದೆ. ಹರಿದಾಸರು ಈ ರೀತಿಯ ಮುಂಡಿಗೆಗಳನ್ನು ಬಳಸುವಾಗ, ತತ್ತ್ವವಿಚಾರಗಳನ್ನು ಅಳವಡಿಸಿ ಗೂಢಾರ್ಥಗಳನ್ನು ಹೇಳುತ್ತಾರೆ.

ಉದಾ : "ಮೂವರೇರಿದ ಬಂಡಿ ಹೊರೆ ನೆರೆಯದು/ಆಡಿ ಪೊತ್ತವನೊಬ್ಬ ನೋಡಿ ತಿರುಗಿದನೊಬ್ಬ /ಓಡಾಡಿದನು ಒಬ್ಬ ಈ ಮೂವರಲ್ಲಿ/ಆಡಿದಗೆ ಕಿವಿಯಿಲ್ಲ ನೋಡಿದನ ಮಗ ಪಾಪಿ/ಓಡಾಡಿದವನೊಬ್ಬ ಓದನಯ್ಯ"

ಇಲ್ಲಿ ಬಂಡಿ ಎಂದರೆ ಮನುಷ್ಯ ದೇಹ, ಅದನ್ನು ಏರಿದವನು ಶ್ರೀಹರಿ, ಮುಖ್ಯಪ್ರಾಣ ಹಾಗೂ ಜೀವ ಎಂದು ಬಗೆದು ಅರ್ಥವಿಸಬೇಕು.

**ಸಾಹಿತ್ಯಿಕ ಮೌಲ್ಯಗಳು**

ಹರಿದಾಸರುಗಳು ಕಾವ್ಯಶಾಸ್ತ್ರದಲ್ಲಿ ಪರಿಣತಿಯನ್ನೂ ಅಪಾರವಾದ ಪ್ರೌಢಿಮೆಯನ್ನೂ ಮೆರೆದವರಾಗಿದ್ದರು, ಕವಿ ಹೃದಯಿಗಳಾಗಿದ್ದರು. ಆದ್ದರಿಂದ ದಾಸಸಾಹಿತ್ಯವು ಧಾರ್ಮಿಕ ಸಾಹಿತ್ಯವಾಗಿದ್ದರೂ; ಸಾಹಿತ್ಯ ಮೌಲ್ಯಗಳನ್ನೊಳಗೊಂಡು ರಚಿತವಾಗಿದೆ. ಕಲ್ಪಕತೆ, ಚುತುರೋಕ್ತಿ ವ್ಯಾಜನಿಂದಾಸ್ತುತಿಯು ವಿಶೇಷವಾಗಿ ಬಳಕೆಯಾಗಿದೆ.

**ದಾಸ ಸಾಹಿತ್ಯದಲ್ಲಿ ಆಧುನಿಕತೆ**

ಸಾಹಿತ್ಯವೆಂಬುದು ಜನ ಜೀವನ ಪ್ರತಿಬಿಂಬವೂ ಹೌದು, ಗತಿಬಿಂಬವೂ ಹೌದು. ದಾಸ ಸಾಹಿತ್ಯವೂ ಇದರಿಂದ ಹೊರತಾಗಿರಲಿಲ್ಲ. ಸ್ವಾತಂತ್ರ್ಯದ ಕಾವು, ಹಸಿವಿನ ನೋವು, ಕನ್ನಡದ ಅಭಿಮಾನ, ಸ್ತ್ರೀ ಸಂವೇದನೆಯಂತಹ ಧ್ವನಿಗಳು ಹೇರಳವಾಗಿ ದಾಸ ಸಾಹಿತ್ಯದಲ್ಲಿ ಕಂಡುಬರುತ್ತದೆ. ಈಚಿನ ಕಾಲದ ಹರಿದಾಸರು ವಿರಾಗಿಗಳಂತೆ ಪ್ರಪಂಚ ಪರ್ಯಟನೆ ಮಾಡುವವರಲ್ಲ. ಆಧುನಿಕ ಉದ್ಯೋಗದಲ್ಲಿ ನಿರತರಾಗಿದ್ದುಕೊಂಡು ಸಾಹಿತ್ಯ ಕರ್ಮದಲ್ಲಿ ತೊಡಗಿದವರು.

ಆಧುನಿಕ ವಿಚಾರಗಳನ್ನು ಕೀರ್ತನೆಗಳನ್ನು ತಂದ ವ್ಯಾಸರಾಯ ಮಠದ ಶ್ರೀ ವಿದ್ಯಾಪ್ರಸನ್ನ ತೀರ್ಥರು ಪೀಠಸ್ಥಯತಿಗಳು. ಉಳಿದಂತೆ ಅಹೋಬಲದಾಸರು ಬಡೇಸಾಬ ರಾಮದಾಸರು, ಗುರುರಾಮವಿಠಲರನ್ನು ಈ ಹಿನ್ನೆಲೆಯಲ್ಲಿ ಸ್ಮರಸಬಹುದು. ೨೦–೨೧ನೆಯ ಶತಮಾನದಲ್ಲಿ ಬರೆದ ಬರೆಯುತ್ತಿರುವ ದಾಸಪರಂಪರೆ; ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ಇಳಿಗಾಲದಲ್ಲಿ ದಾಸರಾದ ಖಂಡಕಿ ರಾಮಾಚಾರ್ಯ ಗಲಿಗಲಿ, ಡಾ.ಟಿ.ಎನ್ ನಾಗರತ್ನ, ಅನಂತವಿಠಲ, ರಾಮಕೃಷ್ಣ ಮುಂತಾದವರನ್ನು ಸ್ಮರಿಸಬಹುದು.

**ಆಧುನಿಕ ದಾಸ ಸಾಹಿತ್ಯಕ್ಕೆ ಉದಾಹರಣೆಗಳು**

ಟಿಪ್ಪು ಸುಲ್ತಾನನ ಕಾಲದಲ್ಲಿ ಮರಾಠರ ಆಕ್ರಮಣವಾದಾಗ ಕಪಿ ಪರಮದೇವ ಚಿತ್ರಿಸಿದ ಕಾಲದ ಸ್ಥಿತಿ

"ಶಿವ ಶಿವ! ಎಂಥ ಕಾಲ ಬಂದಿತೊ / ತುಪ್ಪ ಪಣಕೆ ಸೇರು ಉಪ್ಪೆಂಟು ಸಿದ್ದೆಯ
ಮುಪ್ಪಾಗಕೊಂದೆ ಕೊಳಗ ಬತ್ತ/ಕೊಳಲಾಪರೆ ಫಣವೊಂದೆ ಕಟ್ಟಿಲ್ಲ"

**ತಿರುಮಲಾಂಬರ – ಕನ್ನಡ ಜಾಗೃತಿ**

"ಕನ್ನಡ ತಾಯಿಯ ಕನ್ನೆಯರ್ ನಾವು ಉನ್ನತಿ ಎಳಸುವೆವು"
'ಕೈಪಿಡು ನಲವಿಂ ಕನ್ನಡ ನುಡಿವೆಣ್ಣೆ।

**ತಿರುಲಾಂಬಾರ ಸ್ತ್ರೀ ಸಂವೇದನೆ**

ಶ್ರೀರಾಮನ ಸೀತಾಪರಿತ್ಯಾಗದ ವಿರುದ್ಧ ಧ್ವನಿ ಎತ್ತಿದ್ದು ಹೀಗೆ,
ಜನವಾರ್ತೆಯನೆ ಕೇಳಿ ವನಿತೆಯೊಳು ಖತಿ ತಾಳಿ
ಮಡಿವಳನ ನುಡಿಗಾಗಿ ಕಡು ಮೂರ್ಖ ತಾನಾಗಿ
ಅಡವಿಗಟ್ಟುವರೇನೆ ಮಡದಿಯನ್ನು
ಧರ್ಮಪತ್ನಿಯುಮಂತು ಪೂರ್ಣಗರ್ಭವನಾಂತ
ಅರ್ಧಾಂಗಿಯನ್ನುಳಿದ ನಿರ್ದಯಾತ್ಮ'

**ಈಗಿನ ಶಿಕ್ಷಣ ಸಂಸ್ಥೆಗಳ ಅವ್ಯವಸ್ಥೆ ಹಾಗೂ ಲಾಭಕೋರತನದ ನಿಂದನೆ**

ಕೊಚ್ಚೆ ಮೆತ್ತಿದೆ ನಿನ್ನ। ಅಚ್ಚ ಬಿಳಿ ಸೀರೆಗೆ ಎಲೆ ಸರಸ್ವತಿಯೆ
ಸ್ವಚ್ಛಮಾಡು ಅದನ್ನು ಬಿಚ್ಚಿ।ಬಚ್ಚಲು ಕಲ್ಲಿಗೆ ಬಡಿದು
ನೀರಿನಲಿ ಜಾಲಾಡು। ವಿದ್ಯಾ ಸಂಸ್ಥೆಗಳು ಕಮಟುಗಟ್ಟಿದರಿವೆಗಳು
ಶುದ್ಧವಾಗವು ಅವು ಸುಲಭದಲ್ಲಿ
ಸದ್ದು ಗದ್ದಲವಿಲ್ಲದೆ ಸೋಪು ಸೋಡಾತಂದು
ಗುದ್ದಿ ಗುದ್ದಿ ಒಗೆ, ಕಲೆಯು ಕಳೆದೀತು.

ಹೀಗೆ ಡಾ। ಶ್ರೀನಿವಾಸ ಹಾವನೂರರು ದಾಸಸಾಹಿತ್ಯವನ್ನು ಕೂಲಂಕಷವಾಗಿ ಅಧ್ಯಯನ ನಡೆಸಿ, ಅದರ ವಿಷಯ ವೈವಿಧ್ಯವನ್ನು ಓದುಗರಿಗೆ ಮನಗಾಣಿಸಿದ್ದಾರೆ.

**ಹರಿದಾಸ ಸಾಹಿತ್ಯದ ಆದ್ಯ ಪ್ರವರ್ತಕರಾರು?**

ಈ ಪ್ರಶ್ನೆ ದಾಸ ಸಾಹಿತ್ಯವಲಯಲ್ಲಿ ಚರ್ಚೆಗೆ ಗ್ರಾಸವಾದಾಗ ಡಾ। ಶ್ರೀನಿವಾಸ ಹಾವನೂರರು ಸಕಾರಣವಾಗಿ ತರ್ಕಿಸಿ ಉತ್ತರವನ್ನು ಕಂಡುಕೊಂಡಿದ್ದಾರೆ.

ನಮಃ ಶ್ರೀ ಪಾದರಾಜಾಯ ನಮಸ್ತೆ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ ವಿಜಯಾರ್ಯತೇ ನಮಃ.

ಈ ಶ್ಲೋಕದಲ್ಲಿ ಶ್ರಿ ಪಾದರಾಜರು ಹರಿದಾಸ ಸಾಹಿತ್ಯದ ಆರಂಭಕಾರರು ಎಂದು ಸುವ್ಯಕ್ತವಾಗಿದ್ದು, ಮುಂದೆ "ಕರ್ನಾಟಕ ಕವಿಚರಿತೆಯಲ್ಲಿ (೧೯೨೭) ನರಹರಿ ತೀರ್ಥರ ಉಲ್ಲೇಖ ಕಾಣಸಿಗುತ್ತದೆ. ೧೯೩೩ರಲ್ಲಿ ಬೇಲೂರು ಕೇಶವದಾಸರು 'ಕರ್ನಾಟಕ ಭಕ್ತ

ವಿಜಯ'ದಲ್ಲಿ ನರಹರಿ ತೀರ್ಥರದ್ದೆಂದು ಎರಡು ಹಾಡುಗಳನ್ನು ನೀಡಿದ್ದಾರೆ. ೧೯೫೬ರಲ್ಲಿ ಗೊರಬಾಳರು ಇನ್ನೆರಡು ಕೀರ್ತನೆಗಳನ್ನು ಸೇರಿಸಿ ನರಹರಿ ತೀರ್ಥರು ನಾಲ್ಕು ಹಾಡುಗಳ ಕರ್ತೃ ಎಂದಿದ್ದಾರೆ. ಆದರೆ ಹಾವನೂರರು ಶ್ರೀ ಶ್ರೀ ಪಾದರಾಜರೇ ಆದ್ಯ ಪ್ರವರ್ತಕರು ಶ್ರೀ ನರಹರಿ ತೀರ್ಥರು ಕನ್ನಡ ಕೀರ್ತನೆ ರಚಿಸಿಲ್ಲ. ಎಂದು ಈ ಕೆಳಗಿನ ಕಾರಣಗಳನ್ನು ನೀಡಿ ಸಾಧಿಸಿದ್ದಾರೆ.

- ನರಹರಿ ತೀರ್ಥರದ್ದೆಂದು ಕೀರ್ತನೆಗಳನ್ನು ಪ್ರಕಟಿಸಿದ್ದ ಬೇಲೂರು ಕೇಶವದಾಸರು ಹಾಗೂ ಗೋರಾಬಾಳರೇ ಸ್ವತಃ ಅದರ ಬಗ್ಗೆ ಸಂಶಯ ವ್ಯಕ್ತಪಡಿಸಿದ್ದಾರೆ.
- "ಇಲ್ಲಿಯ ಕನ್ನಡ ಪದಗಳು ೧೬ನೆಯ ಶತಮಾನದ ಭಾಷೆಯೊಳಗೆ ಕಾಣಿ ಬರುವಂತಹವು" (ಬೇ.ಕೇಶವದಾಸರು)
  "ಈ ಪದವು (ಹರಿಯೇ ನಿನಗಿದು ಸರಿಯೇ) ಆರದೆಂಬುದು ಸಂಶಯಾಸ್ಪದವಾಗಿದೆ.
- ನರಹರಿತೀರ್ಥರದ್ದೆಂದು ಪ್ರಕಟಿಸಿದ ಕೀರ್ತನೆಗಳಲ್ಲಿ ವಿಧವಿಧವಾದ ಅಂಕಿತಗಳನ್ನು ಬಳಸಲಾಗಿದ್ದು ಒಂದೆಡೆ'ನರಹರಿ' ಮತ್ತೊಂದೆಡೆ 'ರಘುಪತಿ' ಮಗದೊಂದೆಡೆ ಎರಡೂ ಅಂಕಿತಗಳು ಬಳಕೆಯಾಗಿದೆ.
- "ಇಂತು ಮರುಳಾದೆ" ಹಾಡು ೧೯೨೭ರಲ್ಲಿ ಪ್ರಕಟವಾದಾಗ ಅದರಲ್ಲಿ ಮೂರು ನುಡಿಗಳಿದ್ದವು ಅದು ೧೯೩೩ರಲ್ಲಿ ೬ ನುಡಿಗಳಾಗಿ, ಗೊರಾಬಾಳರ ಪ್ರಕಟಣೆಯಲ್ಲಿ ೨೩ ನುಡಿಗಳಾಗಿ ಹೊರಬಂದಿದ್ದು ಇದು ನರಹರತೀರ್ಥರದ್ದಾಗಿದ್ದಲ್ಲಿ ಈ ರೀತಿಯಾಗಿ ಹಿಗ್ಗಾಡುವ ಧೈರ್ಯ ಯಾರಿಗೂ ಬರುತ್ತಿರಲಿಲ್ಲ.
- ವಿದ್ವಾಂಸರಾದ ಕೆ.ಎಂ ಕೃಷ್ಣ ರಾವ್ ಹಾಗೂ ಜೆ. ವರದರಾಜ ರಾಯರು ಈ ನಾಲ್ಕು ಹಾಡುಗಳು ನರಹರಿತೀರ್ಥರದ್ದಲ್ಲ ಎಂದೂ ಸಕಾರಣವಾಗಿ ನಿರ್ಣಯಿಸಿದ್ದಾರೆ.

ಕೃಷ್ಣರಾಯರು ನೀಡುವ ಕಾರಣ :

(ಅ) ನರಹರಿಯ ತೀರ್ಥರ ಈ ವಿಷಯಕವಾದ ಶಿಷ್ಯ-ಪ್ರಶಿಷ್ಯರು ಯಾರೂ ಇಲ್ಲ.

(ಅ) ಅವರ ಮಾತೃಭಾಷೆ ಕನ್ನಡವಲ್ಲ ಹಾಗೆ ಕನ್ನಡ ಜನರ ಮಧ್ಯ ಅವರು ಬಾಳಿದ್ದು ಕಡಿಮೆ.

- ಬಿ. ವಾದಿರಾಜರ ಪ್ರಕಾರ ಈ ಕೀರ್ತನೆಗಳಲ್ಲಿ 'ಅನುಪಲ್ಲವಿ' ಪ್ರಯೋಗವಿದ್ದು. ಅದು ೧೫ನೇ ಶತಮಾನದಲ್ಲಿ ತೆಲುಗಿನಲ್ಲಿ ಆರಂಭವಾದದ್ದು. ಅಂದರೆ ನರಹರಿ ತೀರ್ಥರ ಕಾಲದ ೧೦೦ ವರ್ಷಗಳ ಅನಂತರ.
- ನರತೀರ್ಥರನ್ನು ಸ್ತುತಿಸಿದ ಯಾವ ಸ್ತುತಿ ಗೀತೆಗಳಲ್ಲಿಯೂ ಅವರ ಕೀರ್ತನಾ ಕರ್ತೃತ್ವದ ಪ್ರಸ್ತಾಪವಿಲ್ಲ.
- ಯತಿಗಳು ರಚಿಸಿದ ಕೀರ್ತನೆಗಳಲ್ಲಿ ಯಥೋಚಿತವಾದ ಶಬ್ದಾರ್ಥವಿರುತ್ತದೆ, ಸೌಷ್ಠವತೆಯಿರುತ್ತದೆ. ಆದರೆ ನಿರೂಪಿತ ಕೀರ್ತನೆಗಳು ಸಾಮಾನ್ಯ ಮಟ್ಟದ್ದಾಗಿದೆ.
- ಪ್ರಸ್ತುತ ಕೀರ್ತನೆಗಳಲ್ಲಿ ಶ್ರೀ ವ್ಯಾಸರಾಯರ ಮತ್ತು ಪುರಂದರದಾಸರ ಅನುಕರಣೆಯಿದ್ದು ಯತಿಗಳು ಈ ರೀತಿಯಾದ ರಚನೆ ಮಾಡಲಾರರು.

• ಶ್ರೀ ನರಹರಿತೀರ್ಥರು ಕೀರ್ತನೆ ರಚಿಸಿದ್ದಾರೆಂದು ೨೦ನೇ ಶತಮಾನಕ್ಕೆ ಮೊದಲಿನ ಯಾರೂ ಹೇಳಿಲ್ಲ. ಆದ್ದರಿಂದ ಹಾವನೂರರ ಸಂಶೋಧಿತ ತೀರ್ಮಾನ ಶ್ರೀ ನರಹರಿತೀರ್ಥರು ಕನ್ನಡ ಕೀರ್ತನೆ ರಚಿಸಿಲ್ಲ. ಶ್ರೀ ಶ್ರೀಪಾದರಾಜರೇ ಆದ್ಯ ಕೀರ್ತನ ರಚಯಿತರಾಗಿದ್ದಾರೆ.

### ನೆಕ್ಕಾರು ಕೃಷ್ಣದಾಸರ ಕಿರುಕಾವ್ಯಗಳು

೧೮ನೇ ಶತಮಾನದಲ್ಲಿ ಬಾಳಿ ಬದುಕಿದ್ದ ನೆಕ್ಕಾರು ಕೃಷ್ಣದಾಸರು ಉಡುಪಿಯ ಪಾರಂಪಳ್ಳಿಯಲ್ಲಿಯವರು. ವರಾಹತಿಮ್ಮಪ್ಪ ಮುದ್ರಿಕೆಯಲ್ಲಿ ಅವರು ಮೂರು ಕಿರುಕಾವ್ಯ ಗಳನ್ನು ರಚಿಸಿದ್ದು, ಅವುಗಳು ಲಕ್ಷ್ಮೀ ಕಲ್ಯಾಣ, ತಿರುಪತಿ ಯಾತ್ರೆ ಹಾಗೂ ಉಡುಪಿ ಶ್ರೀಕೃಷ್ಣ ಚರಿತ್ರೆ. ಇವನ್ನು ಬಾಸೆಲ್ ಮಿಶನ್ನಿನ ಹರ್ಮನ್ ಮೊಗ್ಲಿಂಗ್ ಹಾಗೂ ಕಿಟೇಲರು ಕಂಡುಹಿಡಿದಿದ್ದಾರೆ.

ಲಕ್ಷ್ಮೀ ಕಲ್ಯಾಣ ಕೃತಿಯು ಸಮುದ್ರಮಥನದ ವಿವರದೊಂದಿಗೆ ಆರಂಭವಾಗುತ್ತದೆ. ಮುಂದೆ ಲಕ್ಷ್ಮಿಯು ವರನನ್ನು ಆಯ್ದುಕೊಳ್ಳುವ ಸನ್ನಿವೇಶವಿದೆ. ಇದನ್ನು ನಿಮಿತ್ತವನ್ನಾಗಿಸಿ ಹರಿಯ ದಶಾವತಾರವನ್ನು ಸುಂದರವಾಗಿ ವರ್ಣಿಸುತ್ತಾ ಹೋಗುತ್ತಾರೆ. ನಂತರ ಮದುವೆ ಸಮಾರಂಭ ಶ್ರೀ ಹರಿಯ ಎಣ್ಣೆಮಜ್ಜನ, ಬೀಳ್ಕೊಡುವ ಸಮಾರಂಭವನ್ನು ಕೀರ್ತನೆಯೊಂದಿಗೆ ಕಟ್ಟಿಕೊಟ್ಟಿದ್ದಾರೆ.

ಕೃಷ್ಣದಾಸರ ತಿರುಪತಿಯಾತ್ರೆ ಕಾವ್ಯದಲ್ಲಿ ಅವರ ತಿರುಪತಿಯಾತ್ರೆಯ ಕಥಾನಕವನ್ನು ಹಾಡಿದ್ದಾರೆ. ಹಿಂದಿನ ಕಾಲ್ನಡಿಗೆಯ; ಪ್ರಯಾಸದ ೨೦ ದಿನಗಳ ಪ್ರವಾಸದ ಹಿಂದಿನ ಕಷ್ಟ, ಅದಕ್ಕಾಗಿ ನಡೆಸಿದ ತಯಾರಿ ಹೊರಡುವ ಸಂಭ್ರಮ, ಮರಳಿ ಬಂದ ನಂತರದ ಕಾರ್ಯಚಟುವಟಿಕೆಗಳೆಲ್ಲವನ್ನು ಬಿಡಿಬಿಡಿಯಾಗಿ ಚಿತ್ರಿಸಿದ್ದಾರೆ. ೫೮ ನುಡಿಗಳ ಈ ಸಾಂಗತ್ಯಕೃತಿಯು ಕನ್ನಡದ ಪ್ರಥಮ ಪ್ರವಾಸ ಕಥನವೆನ್ನುವುದು ಹಾವನೂರರ ಅಭಿಮತ.

'ಉಡುಪಿ ಶ್ರೀ ಕೃಷ್ಣ ಚರಿತ್ರೆ'ಯು ಮೂರು ಸಂಧಿಗಳಲ್ಲಿರುವ ಸಾಂಗತ್ಯ ಕೃತಿಯಾಗಿದ್ದು ಉಡುಪಿಯ ಸಂಪ್ರದಾಯ, ನಡಾವಳಿ, ಸಂಭ್ರಮ, ಜನಜೀವನಗಳೆಲ್ಲವೂ ಚಿತ್ರಿತವಾಗಿದೆ.

ಮೊದಲ ಸಂಧಿಯಲ್ಲಿ ಕೃಷ್ಣಾಗಮನ, ಮಧ್ವಸರೋವರ, ಅಷ್ಟಯತಿಗಳು, ವಾದಿರಾಜರು ಗೊತ್ತುಪಡಿಸಿದ ಪರ್ಯಾಯ, ಶ್ರೀ ಕೃಷ್ಣನಿಗೆ ಸಮರ್ಪಿಸುವ ೯ ವಿಧಧ ಪೂಜಾವಿಧಾನ ಗಳಾದ ನಿರ್ಮಾಲ್ಯ, ವಿಸರ್ಜನ, ಉದಯಕಾಲದ ಪೂಜೆ, ಗೋಪೂಜೆ, ಪಂಚಾಮೃತ ಉದ್ವಾರ್ಚನೆ, ತೀರ್ಥಸ್ನಾನ, ಅಲಂಕಾರ, ಮಹಾನೈವೇದ್ಯ, ಮಂಗಳಾರತಿ ಮತ್ತು ಪ್ರದಕ್ಷಿಣ ನಮಸ್ಕಾರಾದಿಗಳ ವರ್ಣನೆ ಅನಂತರ ಸುಗ್ರಾಸ ಭೋಜನ ಇದೇ ರೀತಿ ರಾತ್ರಿ ಕಾಲದ ಪೂಜೆ ನರ್ತನಾದಿಗಳನ್ನು ಕುರಿತು ನುಡಿಗಳಿವೆ.

ಎರಡನೆಯ ಸಂಧಿಯಲ್ಲಿ ಮಕರ ಸಂಕ್ರಾಂತಿಯ ನಿಮಿತ್ತ ನಡೆಯುವ ವಿಧವಿಧದ ಉತ್ಸವಾದಿಗಳು, ಪರ್ಯಾಯೋತ್ಸವ, ಆಗಿನ ಕಾಲದ ಉಡುಪಿಯ ರಥಬೀದಿ, ಚೌಕಿ ಊಟ, ಚಾತುರ್ಮಾಸ, ಗೋಕುಲಾಷ್ಟಮಿ, ಗಣೇಶ ಚತುರ್ಥಿ, ಸರಸ್ವತೀ ಪೂಜೆ, ದೀಪಾವಳಿ, ಧನುರ್ಮಾಸಗಳಂತಹ ಸುದಿನಗಳ ವರ್ಣನೆ ಇದೆ.

ಹೀಗೆ ಇದು ಉಡುಪಿ ಶ್ರೀ ಕೃಷ್ಣನ ಕ್ಷೇತ್ರದ ಸಮಸ್ತ ಹಬ್ಬ ಹರಿದಿನ ಸಂಪ್ರದಾಯಗಳನ್ನು ನೀಡುವ ಕೃತಿಯಾಗಿದ್ದು ಅರ್ಹವಾಗಿ ಉಡುಪಿ ಶ್ರೀಕೃಷ್ಣ ಚರಿತ್ರೆಯಾಗಿದೆ.

**ಧಾರವಾಡ ಪ್ರದೇಶದಲ್ಲಿ ಹರಿದಾಸ ಸಾಹಿತ್ಯ ಉಗಮದ ಕುರಿತಾದ ಹಾವನೂರರ ಚಿಂತನೆ**

ಧಾರವಾಡ ಪ್ರದೇಶದಲ್ಲಿ ದಾಸಸಾಹಿತ್ಯ ತುಸು ತಡವಾಗಿಯೇ ಆರಂಭವಾಗಿತ್ತು. ಅಲ್ಲದೆ ಕಾಗಿನೆಲೆಯ ಕನಕ ದಾಸರನ್ನು ಬಿಟ್ಟರೆ, ಬೇರಾವ ದಾಸರು ಮೊದಲ ಘಟ್ಟದಲ್ಲಿ ಇಲ್ಲಿ ಕಾಣಬರಲಿಲ್ಲ. ಆದರೆ ಈ ಕಡೆಯ ಭಕ್ತರು ಉಡುಪಿ, ತಿರುಪತಿ, ಮಂತ್ರಾಲಯದಂತಹ ಕ್ಷೇತ್ರದ ಕಡೆಗೆ ದರ್ಶನಾರ್ಥಿಗಳಾಗಿ ಬಂದಾಗ ಅಲ್ಲಿಯ ದಾಸ ಪರಂಪರೆಯ ಸಂಪರ್ಕವಾಗಿ ಕ್ರಮೇಣ ಸ್ವಯಂ ಸಾಹಿತ್ಯ ರಚನೆಯತ್ತ ಮನ  ಮಾಡಿರಬಹುದು ಎಂದು ಹಾವನೂರರು ಅಭಿಪ್ರಾಯಪಟ್ಟಿದ್ದಾರೆ. ಹಾಗೆಯೇ ಈ ಜಿಲ್ಲೆಯ ಸವಣೂರಿನಲ್ಲಿ ನೆಲೆ ನಿಂತ ಉತ್ತರಾಧಿ ಮಠದ ಶ್ರೀ ಸತ್ಯಬೋಧ ಸ್ವಾಮಿಗಳು ದಾಸ ಸಾಹಿತ್ಯಕ್ಕೆ ಪೋಷಕರಾಗಿದ್ದರು. ಇವರನ್ನು ಕಾಣುವುದಕ್ಕಾಗಿ ಈ ಕಡೆಗೆ ಬರುತ್ತಿದ್ದ ಜಗನ್ನಾಥ ದಾಸರೂ ಸಾಹಿತ್ಯದ ಉಗಮಕ್ಕೆ ಪ್ರೇರಕರಾಗಿರಬಹುದೆಂದು ಹಾವನೂರರ ಅಭಿಮತ. ಹೀಗೆ ಬೆಳೆದ ಸಾಹಿತ್ಯಕ್ಕೆ ಆದ್ಯರಾಗಿ ಸಾಹಿತ್ಯನಿಧಿಗೆ ಆದ್ಯರಾಗಿ ಬಂದವರು ಕರ್ಜಗಿಯ ಶ್ರೀದವಿಠಲರು ಮತ್ತು ಕದರಮಂಡಲಗಿಯ ಭೀಮಾಚಾರ್ಯರು ಮುಂದೆ ಇವರ ಮನೆತನದವರು ಹಾಗೂ ಇನ್ನು ಸುಮಾರು ೨೫ ಜನ ಹರಿದಾಸರು ಧಾರವಾಡದಲ್ಲಿ ಬೆಳಕಿಗೆ ಬಂದಿದ್ದಾರೆ ಎಂದು ಹಾವನೂರರು ಕಂಡುಕೊಂಡಿದ್ದಾರೆ.

**ಸೋದೆಯ ಶ್ರೀ ವಿಶ್ವೇಂದ್ರ ತೀರ್ಥರ ಕೃತಿ ವಿಮರ್ಶೆ**

ಸೋದೆ ಮಠದ ಶ್ರೀ ವಿಶ್ವಾಧೀಶರಿಂದ ಆಶ್ರಯ ದೀಕ್ಷೆಯನ್ನು ಪಡೆದ ಶ್ರೀ ವಿಶ್ವೇಂದ್ರ ತೀರ್ಥರು ಜನಿಸಿದ್ದು ೧೮೮೧ರಲ್ಲಿ. ತಮ್ಮ ೧೬ರ ಹರೆಯದಲ್ಲಿ ದೀಕ್ಷೆ ಪಡೆದ ತೀರ್ಥರು ತಮ್ಮ ಗುರುಬಂಧು ಶ್ರೀ ವಿಬುಧಪ್ರಿಯ ತೀರ್ಥರಲ್ಲಿ ಶಾಸ್ತ್ರಾಭ್ಯಾಸವನ್ನು ಮುಂದುವರಿಸಿದರು. ತೀರ್ಥರ ಧಾರ್ಮಿಕ–ಲೌಕಿಕ–ಸಾಹಿತ್ಯಿಕ ಕೊಡುಗೆ ಅಪಾರವಾಗಿದ್ದು ಅವರ ಕೃತಿಗಳನ್ನು ಹಾವನೂರರು ವಿಮರ್ಶಿಸಿದ್ದು ಹೀಗೆ.

ಶ್ರೀ ವಿಶ್ವೇಂದ್ರತೀರ್ಥರು ರಾಜೇಶ– ಹಯಾಸ್ಯ ಅಂಕಿತದಲ್ಲಿ ೪೫ ಕೀರ್ತನೆಗಳನ್ನು ಜೊತೆಗೆ ಒಂದು ತುಳು ಗೀತೆ ಮತ್ತು ಎರಡು ಸಂಸ್ಕೃತ ಸ್ತೋತ್ರಗಳನ್ನು ರಚಿಸಿದ್ದು ಅವೆಲ್ಲವೂ ದೇವ, ಗುರುಗಳ ಸ್ತುತಿಪರವಾದವುಗಳು. ನೀತಿಬೋಧೆಯಾಗಲೀ, ತತ್ವವಿವೇಚನೆಯಾಗಲೀ ಕಂಡು ಬರುವುದಿಲ್ಲ. ಅವೆಲ್ಲವೂ ಸುಲಭಗ್ರಾಹ್ಯ ಹಾಗೂ ಗೇಯಗುಣವುಳ್ಳವುಗಳು. ಇವುಗಳ ವಿಶ್ಲೇಷಣೆಯನ್ನು ಹಾವನೂರರು ಮಾಡಿರುತ್ತಾರೆ.

ಆರಂಭದಲ್ಲಿ ಶ್ರೀ ಹರಿಯನ್ನು ಸ್ತುತಿಸುವ ಉದಯರಾಗ ಕೀರ್ತನೆಯಲ್ಲಿ ಮಲಗಿರುವ ಭಗವಂತನನ್ನು ಎಬ್ಬಿಸುವ ಕಲ್ಪನೆ ಇದೆ. ಸನಕಾದಿ ಮುನಿಗಳು, ನಾಗಭೂಷಣ, ವಿಭೂಷಣ, ಅರ್ಜುನ, ದುರ್ವಾಸ, ಭೃಗುಮುನಿಯಂತಹವರೆಲ್ಲರೂ ಆಗಮಿಸಿದ್ದಾರೆ. ಆದರೂ ಭಗವಂತ ಎದ್ದೇಳುವುದಿಲ್ಲ. ಆಗ "ಸಿರಿದೇವಿ ನಿನ್ನಂಘ್ರಿಗಳನ್ನೊತ್ತಿ ಬಿಡಲೇನೊ ಮಾರುತಿಯು ಜಪವಿನ್ನು

ಮುಗಿಯಲಿಲ್ಲೊ' ಎಂದು ಊಹಿಸುತ್ತಾರೆ.

'ಶ್ರೀ ಹರಿಯ ದಾಸಗೆ ಭಯವಿಲ್ಲ' ಎಂಬ ಮುಂದಿನ ಕೀರ್ತನೆಯ ಚತುರೋಕ್ತಿಯಿಂದ ಕೂಡಿದ್ದು ರಾವಣ–ವಿಭೀಷಣರಿಗೆ ಅನ್ವಯಿಸಿ 'ತರಳ ಪ್ರಹ್ಲಾದಗೆ ಭಯವೆಂದಿಗೂ ಸೋಂಕಲಿಲ್ಲ, ತರಳನಪಿತಗೆ ಭಯವೆಂದಿಗೂ, ತಪ್ಪಲಿಲ್ಲ' ಎಂದು ಹಾಡಿದ್ದಾರೆ. ಮುಂದಿನದು ನಾನೇನು ತಪ್ಪು ಮಾಡಿಲ್ಲ ಆದುದರಿಂದ ನನ್ನನ್ನು ಪೊರೆಯ ಎನ್ನುವಲ್ಲಿ ವ್ಯಾಜೋಕ್ತಿಯನ್ನು ಹಾವನೂರರು ಗುರುತಿಸುತ್ತಾರೆ.

ಕೀರ್ತನೆ ೪ ರಲ್ಲಿ ಭಗವಂತನ ವಿವಿಧ ಅವತಾರಗಳನ್ನಾಯ್ದುಕೊಂಡಿದ್ದು ಅದರಲ್ಲಿ ಕೆಲವು ನಮಗೆ ಅಪಚರಿತವಾದದ್ದು ಇದೆ. ಉದಾ : ಮಹೀದಾಸನ ಅವತಾರ. ಹಾಗೆಯೇ ಮುಂದಿನ ಕೀರ್ತನೆಗಳಲ್ಲಿ ಒಕ್ಕಣೆಗಳನ್ನು ವ್ಯಾಜನಿಂದಾಸ್ತುತಿಗಳನ್ನು ಬಳಸಿರುವುದನ್ನು ಗಮನಿಸಬಹುದು.

ವಿಶ್ವೇಂದ್ರ ತೀರ್ಥರು, ದಶಾವತಾರಗಳನ್ನು ಬಹಳ ಸುಂದರವಾಗಿ ಚಿತ್ರಿಸಿದ್ದಾರೆ. ಅಲ್ಲದೆ ತೀರ್ಥಕ್ಷೇತ್ರ ದರ್ಶನಕ್ಕಾಗಿಯೋ, ಲೋಕಸಂಚಾರಕ್ಕಾಗಿಯೋ ಹೋದಾಗ ನೋಡಿದ ದರ್ಶಿಸಿದ ಕ್ಷೇತ್ರಗಳ ನದ–ನದಿಗಳನ್ನು ಕೀರ್ತನೆಗಳಲ್ಲಿ ಬಳಸಿಕೊಂಡಿದ್ದಾರೆ. ಉದಾಹರಣೆಗೆ ಉಡುಪಿಯ ಉಂಡಾರುವಿನ ವಿಷ್ಣುಮೂರ್ತಿಯ ಬಗ್ಗೆ ಅದಕ್ಕೆ ಸಂಬಂಧಿಸಿದಂತೆ ಬಾಲಕನ ಕಥೆಯ ಕುರಿತು, ತಿರುಪತಿಯ ವೆಂಕಟೇಶ, ಮಂಜಗಣಿಯ ವೆಂಕಟೇಶನ ಕಲ್ಪನೆ, ವೇತ್ರವತೀ ನದಿಯ ತೀರದ ಚಿಂತಾಮಣಿಯ ನರಸಿಂಹದೇವ, ನೇತ್ರಾವತಿ ನದಿಯ ಪೌರಾಣಿಕ ಹಿನ್ನೆಲೆ ಕಾಂಚಿಯ ವರದರಾಜನ ಕುರಿತಾದ ಕಲ್ಪನೆಗಳೆಲ್ಲವನ್ನು ಸ್ಮರಿಸಬಹುದು.

ರಾಮಾವತಾರದ ಶ್ರೀ ರಾಮನನ್ನು 'ಏಕ' ಪದದೊಂದಿಗೆ ವರ್ಣಿಸಿದ್ದು ಹೊಸ ರೀತಿಯಾದ ವರ್ಣನೆ ಇಲ್ಲಿ ರಾಮನ ವಚನ, ರಾಮನ ಬಾಣ, ರಾಮನ ವರ, ರಾಮನ ಪತ್ನಿ–ಎಲ್ಲವೂ ಒಂದು ಅಂಕಿತ ಸದರಿನಲ್ಲಿ ಬರುವಂತಹವು. ಶ್ರೀಕೃಷ್ಣ ಸ್ತುತಿಯೂ ವಿಶ್ವೇಂದ್ರರಲ್ಲಿ ನಾವೀನ್ಯರೀತಿಯಿಂದ ಮೂಡಿಬಂದಿದೆ. ಇಲ್ಲಿ ಕೃಷ್ಣನ ಬಾಲಲೀಲೆಗಳಾಗಲೀ ಹೆಂಗಳೆಯರೊಂದಿಗೆ ಆಟಗಳಾಗಲಿ ಅವರಿಗೆ ಸಿಟ್ಟು ತರಿಸಿಲ್ಲ ಎಂಬುದಾಗಿ ಚಿತ್ರಿಸುತ್ತಾರೆ. ಹಾಗೆಯೇ ಕೃಷ್ಣ–ಸುದಾಮರನ್ನು ಈ ಶತಮಾನದ ಸ್ನೇಹಿತರಂತೆ ಚಿತ್ರಿಸಿದ್ದಾರೆ.

## ವಿಶ್ವೇಂದ್ರರ ಕೃತಿಗಳಲ್ಲಿ ದೇವತಾ ಸ್ತುತಿ

ಶ್ರೀಗಳು ತಮ್ಮ ಕೃತಿಯಲ್ಲಿ ಮಹಾಲಕ್ಷ್ಮಿಯನ್ನು ಸ್ತುತಿಸುತ್ತಿದ್ದರೂ ಅಲ್ಲಿ ಹರಿಯಸ್ತುತಿಯೇ ಎದ್ದು ಕಾಣುತ್ತದೆ. ಮಹಾಲಕ್ಷ್ಮಿಯ ಯೌವನಕ್ಕೆ ಕೆಡುಕಾಗಬಾರದೆಂದು ಅವಳ ಉದರದಿಂದ ಮಗುವನ್ನು ಪಡೆಯದೇ, ಹೊಕ್ಕುಳದಿಂದ ಹುಟ್ಟಿಸುತ್ತಾನೆ, ಮಹಾಪ್ರಳಯ ಕಾಲದಲ್ಲೂ ಲಕ್ಷ್ಮೀ ಸಹಿತನಾಗಿರುವ, ಶ್ರೀ ಲಕ್ಷ್ಮಿಯ ದೇಹಾಂಗಗಳನ್ನು ಆಭರಣಾದಿ ರೂಪದಿಂದ ಸದಾ ಆಲಂಗಿಸಿರುವ ಎಂದೂ ಹೇಳುವಲ್ಲಿ ಹರಿಸ್ತುತಿಯೇ ಪ್ರಧಾನವಾಗುತ್ತದೆ.

ಕ್ವಚಿತ್ತಾಗಿ ಬ್ರಹ್ಮದೇವಸ್ತುತಿಯೂ ಇದೆ. ಬ್ರಹ್ಮದೇವ ಸುರಾಸುರ ಭೇದವಿಲ್ಲದೆ ಸಕಲರಿಗೂ ವರನೀಡುತ್ತಾನೆ ಎನ್ನುವುದು ಮೋಜಿನ ಪ್ರಸಂಗವಾಗಿದೆ. ಅವತಾರತ್ರಯ ಇಲ್ಲಿ ಹನುಮ, ಭೀಮ, ಮಧ್ವ ಈ ಮೂರು ಅವತಾರಗಳಲ್ಲಿ ವಾಯು ದೇವರ ಕಾರ್ಯವನ್ನು ಅರ್ಥವತ್ತಾಗಿ

ಕೊಟ್ಟಿದ್ದಾರೆ. ಶ್ರೀ ಹರಿಯ ದೇವತಾ ಪರಿವಾರದಲ್ಲಿ ಬರುವ ಶೇಷದೇವರು ಸ್ತುತಿಸಲ್ಪಟ್ಟಿದ್ದಾರೆ. ಶಿವ, ಪಾರ್ವತಿ, ಗಣಪತಿ ಸ್ತುತಿಗಳು ಬಹಳ ಸುಂದರವಾಗಿ ಮೂಡಿಬಂದಿದೆ.

**ಯತಿಸ್ತುತಿ**

ಶ್ರೀ ವಿಶ್ವೇಂದ್ರ ತೀರ್ಥರು ಹಲವು ಯತಿಗಳನ್ನು ತಮ್ಮ ಕೃತಿಯಲ್ಲಿ ಸ್ತುತಿಸಿದ್ದು ಅವರಲ್ಲಿ ಜಯತೀರ್ಥರಿಗೆ ಮೊದಲ ಸ್ಥಾನ ನೀಡಿದ್ದಾರೆ. ಯತಿವರೇಣ್ಯ ಶ್ರೀ ರಾಘವೇಂದ್ರರಿಗೂ ಸ್ಥಾನ ನೀಡಿದ್ದಾರೆ. ಮಠ ಪರಂಪರೆಯ ಆಧಾರದಲ್ಲಿ ಸೋದೆ ಮಠದ ಯತಿಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕಲ್ಪಿಸಿದ್ದಾರೆ. ಸೋದೆ ಮಠದ ಆದ್ಯ ಪುರುಷರಾದ ಶ್ರೀ ವಿಷ್ಣು ತೀರ್ಥರನ್ನು, ವಾದಿರಾಜರಿಗೆ ಗುರುಗಳಾದ ಶ್ರೀ ವಾಗೀಶ ತೀರ್ಥರನ್ನೂ ಸ್ಮರಿಸಿದ್ದಾರೆ. ಶ್ರೀ ವಾದಿರಾಜರು ವಿಶ್ವೇಂದ್ರ ತೀರ್ಥರ ಪರಮೋಚ್ಚ ಗುರುಗಳಾಗಿದ್ದು ಅವರ ಸಮಸ್ತ ಕೃತಿಗಳನ್ನು ಮನನ ಮಾಡಿಕೊಂಡಿದ್ದಾರೆ ಮತ್ತು ತಮ್ಮ ಕೃತಿಗಳಲ್ಲಿ ಅಲ್ಲಲ್ಲಿ ಬಳಸಿ ಕೊಂಡಿದ್ದಾರೆ. ತೀರ್ಥರ ೪೨ನೆಯ ಕೀರ್ತನೆಯಲ್ಲಿ ಶ್ರೀ ವಿಶ್ವಪ್ರಿಯತೀರ್ಥರ ಸ್ತುತಿಯಿದ್ದು ಮೈಸೂರ ದೊರೆ ಮುಮ್ಮಡಿ ಕೃಷ್ಣರಾಜನು ಅವರನ್ನು ಸನ್ಮಾನಿಸಿದ ವಿಚಾರವು ದಾಖಲಾಗಿದೆ. ಇವರ ನಂತರ ಪೀಠಕ್ಕೆ ಬಂದ ವಿಶ್ವಾಧೀಶತೀರ್ಥರಿಗೆ ಇಂಗ್ಲೆಂಡಿನ ವಿಕ್ಟೋರಿಯಾ ರಾಣಿ ಪ್ರಶಸ್ತಿ ನೀಡಿದ್ದರ ಉಲ್ಲೇಖವಿದೆ. ಹಾಗೆಯೇ ವಿಭುಧಪ್ರಿಯರೆಂಬ ಯತಿಗಳು ಶ್ರೀ ವಿಶ್ವಾಧೀಶ ರಲ್ಲಿ ನ್ಯಾಯಸುಧಾ ಮುಂತಾದ ಶಾಸ್ತ್ರಗಳನ್ನು ಅಭ್ಯಸಿಸಿದರೆಂಬ ವಿಚಾರವು ಇಲ್ಲಿ ಉಲ್ಲೇಖಿಸಲ್ಪಟ್ಟಿದೆ. ತೀರ್ಥರು ತಮ್ಮ ಕೀರ್ತನೆಗಳಲ್ಲಿ ಉಡುಪಿ ಮತ್ತು ಸೋದಾ ಕ್ಷೇತ್ರಗಳನ್ನು ವರ್ಣಿಸಿದ್ದಾರೆ. ಹೀಗೆ ಹಾವನೂರರು ಶ್ರೀ ವಿಶ್ವೇಂದ್ರತೀರ್ಥರ ಕೃತಿ ಸಂಪುಟಗಳ ಸಮೀಕ್ಷೆಯನ್ನು ಮಾಡಿರುತ್ತಾರೆ.

## ಕಾದಂ– ಕಥನದ ಕಥೆ

ಡಾ। ಶ್ರೀನಿವಾಸ ಹಾವನೂರರು ಹೊಸದನ್ನು ಕಂಡು ಹಿಡಿಯುವ ಸಂಶೋಧಕರು ಮಾತ್ರವಲ್ಲ. ಹೊಸದನ್ನು ಸೃಷ್ಟಿಸಿ ಸೃಜನಶೀಲ ಸಾಹಿತ್ಯಕ್ಕೂ ಗಣನೀಯವಾದ ಕೊಡುಗೆ ಯನ್ನು ನೀಡಿದ್ದಾರೆ. ಅಂಥಹದ್ದರಲ್ಲಿ ಅವರದೇ ಹೊಸ ಸೃಷ್ಟಿಯಾದ 'ಕಾದಂ ಕಥನ'ವೂ ಒಂದು.

ಕಾದಂ ಕಥನವೆಂಬುದು ಕಾದಂಬರಿಯೊಂದರ ಸಾರಾಂಶವಲ್ಲ ಅಥವಾ ಅದರ ಕಥಾಸಾರವೂ ಅಲ್ಲ. ಇಲ್ಲಿ ಕಾದಂಬರಿಯೊಂದರ ಯಾವುದೋ ಒಂದು ಪಾತ್ರವನ್ನು ಅಥವಾ ಹೃದ್ಯವಾದ ಸನ್ನಿವೇಶವನ್ನು ಯಥಾವತ್ತಾಗಿ ಬಳಸಿಕೊಂಡು ಆ ಮೂಲಕ ಹೇಳಲಾದ ಕಥನ. ಇದರಿಂದಾಗಿ ದೀರ್ಘವಾದ ಕಾದಂಬರಿಯೊಂದನ್ನು ಪೂರ್ಣವಾಗಿ ಓದಲಾಗದಿದ್ದರೂ, ಸಂಕ್ಷೇಪವಾಗಿ ಮೂಲಕೃತಿಯನ್ನೇ ಓದಿದಂತಾಗಿ ರಸಾನುಭವವನ್ನು ಪಡೆಯುವುದು ಸಾಧ್ಯವಾಗುತ್ತದೆ. ಯಾವುದೋ ಪಾತ್ರ ಅಥವಾ ಸನ್ನಿವೇಶದ ಆಧಾರದಿಂದ

ಬರೆಯುವ ಹಾವನೂರುಕೃತ ಕಾದಂಕಥನದಲ್ಲಿ ಕಾದಂಬರಿಯ ಆದಿ-ಮಧ್ಯ-ಅಂತ್ಯಗಳನ್ನು ಉಳಿಸಿಕೊಳ್ಳುವುದು ಅವಶ್ಯಕ. ಒಂದೊಮ್ಮೆಗೆ ಅದು ಸಾಧ್ಯವಾಗದೇ ಇದ್ದಾಗ ಕಾದಂಬರಿಯ ಪೂರ್ವಾರ್ಧ ಇಲ್ಲವೇ ಉತ್ತರಾರ್ಧದ ಕಥಾ ಭಾಗವನ್ನಷ್ಟನ್ನೇ ತೆಗೆದುಕೊಳ್ಳಬಹುದು.

ತಾನು ಕಂಡುಂಡ ಜ್ಞಾನಸುಧೆ ಎಲ್ಲರದಾಗಬೇಕೆಂಬುದು ಹಾವನೂರರ ಗುಣ ವಿಶೇಷತೆ. ಬಹುಶಃ ಈ ಸ್ವಭಾವವೇ ಕಾದಂಕಥನದ ಸೃಷ್ಟಿಗೆ ಪ್ರೇರಣೆಯನ್ನೊದಗಿಸಿರ ಬಹುದು. ತಾವು ಓದಿ ಮೆಚ್ಚಿದ ಕಾದಂಬರಿಗಳನ್ನು ಇತರರಿಗೂ ಉಣಬಡಿಸುವ ಯೋಚನೆ ಬಂದು ಈ ಹೊಸ ಸೃಷ್ಟಿಯನ್ನು ನುಡಿ, ಕತೆಗಾರ ಮುಂತಾದ ಪತ್ರಿಕೆಗಳಲ್ಲಿ ಪ್ರಕಟಿಸಲಾರಂಭಿಸಿದರು. ಆದರೆ ಅವು ಕೇವಲ ೪-೫ ಪುಟಗಳಿಗಷ್ಟೇ ಸೀಮಿತವಾಗಿದ್ದುದ ರಿಂದ ಓದುಗರಿಗೆ ಸಂಪೂರ್ಣ ರಸಸ್ವಾದನೆ ನೀಡುವುದು ಸಾಧ್ಯವಾಗುತ್ತಿರಲಿಲ್ಲ. ಈ ಯೋಚನೆ ಹಾವನೂರರ ಮನದಲ್ಲಿ ಹಾಗೇ ಉಳಿದುಕೊಂಡಿತ್ತು. ಮುಂದೆ ೧೯೫೬ರಲ್ಲಿ 'ಕಸ್ತೂರಿ' ಮಾಸ ಪತ್ರಿಕೆ ಪ್ರಾರಂಭವಾದಾಗ ಅದರ ಸಂಪಾದಕರಾಗಿ ಶ್ರೀ ಪಾ.ವೆಂ. ಆಚಾರ್ಯರು ನೀಡಿದ ಪ್ರಚೋದನೆ ಯಿಂದ ಉತ್ತೇಜಿತರಾದ ಹಾವನೂರರು ಮುಂದೆ ಸುಮಾರು ನಲವತ್ತು ಕಾದಂಕಥನಗಳನ್ನು ಪ್ರಕಟಿಸಿದ್ದಾರೆ. ಅವುಗಳು ದೇವುಡು ಅವರ ಮಹಾಕ್ಷತ್ರೀಯ, ಗಳಗನಾಥರ 'ಮಾಧವ ಕರುಣಾ ವಿಲಾಸ', ಕನ್ನಡಿಗರ ಇತಿಹಾಸ, ಕೆರೂರು ವಾಸುದೇವಚಾರ್ಯರ 'ಯದು ಮಹಾರಾಜ', ಶಿವರಾಮ ಕಾರಂತರ 'ಮೂಕಜ್ಜಿಯ ಕನಸುಗಳು', ಎಸ್.ಎಲ್. ಭೈರಪ್ಪನವರ ದಾಟು, ಸಾಕ್ಷಿ ಮುಂತಾದವುಗಳು ಪ್ರಮುಖವಾದವುಗಳು.

ಕನ್ನಡದ ಜೊತೆಗೆ ಅನ್ಯಭಾಷೀಯ ಕೃತಿಗಳನ್ನು ಕಾದಂಕಥನವನ್ನಾಗಿಸಿದ್ದು ಅದರಲ್ಲಿ ಆರ್.ಎಲ್. ಸ್ಟೀವನ್‌ಸನ್ ಬರೆದ ಡಾ. ಜೆಕಿಲ್ ಮತ್ತು ಮಿ.ಹೈಡ್, ಖುಷವಂತ ಸಿಂಗರ "Train to Pakistian" ಎಫ್.ಎಬ್ಲ್ಯೂ ಬೇನ್ ಬರೆದ "The Digit of the Moon" ಮುಂತಾದ ಇಂಗ್ಲೀಷ್ ಕೃತಿಗಳು, ನಾ ಪೇಂಡಸೆಯವರ 'ರಾಮಶರಣಚೀ ಗೋಷ್ಟ' ಗ.ದಿ ಮಾಡಗೂಳಕರ ಅವರ 'ಗ್ರಾಮಜೀವನ' ಮೊದಲಾದ ಮರಾಠಿ ಕಾದಂಬರಿಗಳು, ವಿಭೂತಿ ಭೂಷಣ ಬಂದೋಪಾಧ್ಯಾಯ ಅವರ ಬಂಗಾಳಿ ಕೃತಿ 'ಪಥೇರ್ ಪಾಂಚಾಲಿ' ಮುಂತಾದವುಗಳು'.

ಡಾ। ಶ್ರೀನಿವಾಸ ಹಾವನೂರರ ಎಂಟು ಕಾದಂಬರಿಗಳ ಸಂಗ್ರಹವಾದ 'ಮಾತಂಗಿ ಮತ್ತು ಇತರ ಕಾದಂಕಥನಗಳು' ಕೃತಿ ೧೯೮೨ರಲ್ಲಿ ಧಾರವಾಡ ಪ್ರತಿಭಾ ಗ್ರಂಥಮಾಲೆಯಿಂದ ಮೊದಲ ಬಾರಿಗೆ ಪ್ರಕಟವಾಯಿತು. ಆನಂತರ ೧೯೮೪ರಲ್ಲಿ ಧಾರವಾಡದ ಅನನ್ಯ ಪ್ರಕಾಶನದಿಂದ 'ಕುಮುದಿನಿ' ಹಾಗೂ ಇತರ ಕಾದಂ ಕಥನಗಳು ಮುಂದೆ ಎಸ್.ಎಲ್. ಭೈರಪ್ಪನವರ ಕಾದಂಬರಿಗಳಿಂದ ಆರಿಸಲಾದ ಐದು ಪ್ರಸಂಗಗಳ ಸಂಗ್ರಹವಾಗಿ 'ಡಾ। ಎಸ್.ಎಲ್ ಭೈರಪ್ಪನವರ ಕಾದಂ ಕಥನಗಳು' ಎಂಬ ಕೃತಿ ಹೊರಬಂದಿದೆ.

ಡಾ। ಹಾವನೂರರು ಈ ರೀತಿಯಾಗಿ ಬರೆದ ಕಾದಂ ಕಥನಗಳು ನಿಸ್ಸಂದೇಹವಾಗಿ ಓದುಗರಿಗೆ ರಸದೌತಣವನ್ನು ನೀಡುವುದರಲ್ಲಿ ಸಫಲವಾಗಿದ್ದು ಮಾತ್ರವಲ್ಲದೆ ಸ್ವತಃ ಮೂಲ ಲೇಖಕರೇ 'ಮೆಚ್ಚಿ ಅಹುದಹುದೆನ್ನುವಂತೆ' ರಚನೆಯಾಯಿತು ಎನ್ನುವುದು ಅವರ ಸೃಜನಶೀಲ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿಯಾಗಿದೆ.

# ಐ.ಮಾ ಮುತ್ತಣ್ಣರ ಗ್ರಂಥವಿಮರ್ಶೆ

ಐ.ಮಾ. ಮುತ್ತಣ್ಣರವರು ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ ಎಂಬ ಬೃಹತ್ ಗ್ರಂಥವೊಂದನ್ನು ರಚಿಸಿದ್ದು ಅದರಲ್ಲಿ ಸಾಮಾನ್ಯವಾದ ಭಾಷಾದೋಷದಿಂದ ಹಿಡಿದು ೧೯ನೇ ಶತಮಾನದ ಸಾಹಿತ್ಯದ–ಸಾಹಿತ್ಯಿಕರ ಬಗ್ಗೆ ಅನ್ಯಾಯವೆನಿಸುವ ನೂರಾರು ಸಂಶೋಧನಾತ್ಮಕ ತಪ್ಪುಗಳಿವೆ. 'ಹೊಸಗನ್ನಡದ ಅರುಣೋದಯ'ದ ಸಂಶೋಧನೆಯಲ್ಲಿ ಅತ್ಯಂತ ನಿಖರವಾದ, ಅಧಿಕೃತವಾದ ಮಾಹಿತಿಯನ್ನು ಕಲೆ ಹಾಕಿದ ಹಾವನೂರರಿಗೆ ಸಹಜವಾಗಿಯೇ ಆ ದೋಷಗಳು ಗಮನಕ್ಕೆ ಬಂದುವು. ದಾರಿತಪ್ಪಿಸುವ ಈ ಗ್ರಂಥ ಅತೀವವಾದ ಬೇಸರವನ್ನು ತಂದಿತು. ಇದಕ್ಕಾಗಿ ಆ ಗ್ರಂಥದ ತಪ್ಪುಗಳನ್ನು ಓದುಗರಿಗೆ ತಿಳಿಸಿ ಕೊಡುವ ಪ್ರಯತ್ನವನ್ನು ಈ ರೀತಿಯಾಗಿ ಮಾಡಿದ್ದಾರೆ.

ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ ಗ್ರಂಥವು ನಿರೂಪಣೆಯಲ್ಲಿಯೇ ದಾರಿತಪ್ಪಿದೆ. ೨೫ ಅಧ್ಯಾಯವುಳ್ಳ ಈ ಗ್ರಂಥವು ಒಂದಕ್ಕೂ ಶೀರ್ಷಿಕೆಯನ್ನು ಪಡೆದಿಲ್ಲ. ಒಂದು ಅಧ್ಯಾಯದಿಂದ ಇನ್ನೊಂದು ಅಧ್ಯಾಯನಕ್ಕೆ ಹೊಂದಿಕೆಯಿಲ್ಲ. ನೀಡಿರುವ ಉಪಶೀರ್ಷಿಕೆಗಳು ಶಾಸ್ತ್ರೀಯ ಗ್ರಂಥಕ್ಕೆ ಸೂಕ್ತವಾಗಿಲ್ಲ.

ಉದಾ: ಭಾರತೀಯ ಮತ್ತು ಐರೋಪ್ಯ ವಿದ್ಯಾಂಸರು ಬಿಕ್ಕಿ ಬಿಕ್ಕಿ ಅತ್ತರು

- ಪುಸ್ತಕದ ತುಂಬೆಲ್ಲಾ ಭಾಷಾದೋಷಗಳಿವೆ. ಅಸ್ಪಷ್ಟ ವಿಚಾರಗಳು, ಪುನರುಕ್ತಿಗಳು ಹಾಗೂ ಅಚ್ಚಿನ ತಪ್ಪುಗಳಿಂದ ಕೂಡಿದೆ.
  ಉದಾ : "ದಕ್ಷಿಣ ಹಿಂದೂಸ್ಥಾನದ ಹಲವು ಪ್ರಧಾನ ಗ್ರಂಥ ಭಂಡಾರಗಳನ್ನು ಶೋಷಣೆ ಮಾಡಿದೆನು" ಎಂದು ನಿವೇದಿಸಿದ್ದು ಇದು 'ಶೋಧನೆ' ಮಾಡಿದೆನು ಎಂದಿರಬಹುದು" ಇಂತಹ ಹಲವಾರು ತಪ್ಪುಗಳಿವೆ.
- ಈ ಗ್ರಂಥದಲ್ಲಿ ನೀಡಿರುವ ಮಾಹಿತಿಗೆ ಆಕರವನ್ನು ನೀಡದೆ ಇರುವುದು ಅದರ ಪ್ರಾಮಾಣ್ಯತೆಯ ಮೇಲೆ ಸಂಶಯ ಮೂಡಿಸುತ್ತದೆ.
- ಪಾಶ್ಚಾತ್ಯ ಹಾಗೂ ದೇಶೀಯರ ಹೆಸರನ್ನು ಬರೆಯುವಲ್ಲಿಯೂ ತಪ್ಪಾಗಿದೆ. ಉದಾ : ಬಾಲಾಚಾರ್ಯ (ಬಾಳಾಚಾರ್ಯ) ಸಕ್ಕರಿ ಟುರುಮುರಿ (ತುರುಮುರಿ) ಫರ್ನಾಂಡಿಸ್ ಕಿಟೆಲ್ (ಫರ್ಡಿನಾಂಡ್ ಕಿಟೆಲ್).
- ಗ್ರಂಥದಲ್ಲಿ ಬರುವ ವಿಷಯವು ತಪ್ಪು ಗ್ರಹಿಕೆಯಿಂದ ಕೂಡಿದೆ. ಬಿ.ಮಲ್ಲಪ್ಪನವರು ನಾಗವರ್ಮನ ಕಾದಂಬರಿಯನ್ನು ಸಂಪಾದಿಸಿದ್ದು, ಗ್ರಂಥದಲ್ಲಿ ಬಾಣನ ಕಾದಂಬರಿಯನ್ನು ಭಾಷಾಂತರಿಸಿ ಪ್ರಕಟಿಸಿದ್ದಾರೆ ಎಂದೂ, ಜೆ. ಸ್ಟೀಫನ್ನನ್ನು ಮುದ್ರಾಮಂಜೂಷವನ್ನು ಭಾಷಾಂತರಿಸಿದನೆಂದೂ ದಾಖಲಾಗಿದೆ. ಲೇಖಕರ ಕೃತಿಗಳ ಹಾಗೂ ಘಟನೆಗಳ ವರ್ಷವನ್ನು ಉಲ್ಲೇಖಿಸುವಲ್ಲಿಯೂ ಹಲವಾರು ತಪ್ಪುಗಳಿದ್ದು ಕೆಲವನ್ನು ಮಾತ್ರ ಇಲ್ಲಿ ಉಲ್ಲೇಖಿಸಲಾಗಿದೆ.
- ಕ್ರಿಶ ೧೮ನೇ ಶತಮಾನದಲ್ಲಿ ಬ್ರಿಟಿಷರು ತಂದ ಮುದ್ರಾಯಂತ್ರವು ಕಲ್ಕತ್ತದಲ್ಲಿ ಅನಂತರ

ಐವತ್ತು ವರ್ಷಗಳಲ್ಲಿ ಬೊಂಬಾಯಿ ಮತ್ತು ಮದ್ರಾಸ್‌ಗಳಲ್ಲಿ ಇಡಲ್ಪಟ್ಟವು ಎಂದಿದ್ದಾರೆ. ವಾಸ್ತವವಾಗಿ ಮುದ್ರಾಯಂತ್ರವನ್ನು ಪೋರ್ಚುಗೀಸರು ಗೋವಾಕ್ಕೆ ಈ ಮೊದಲೇ ತಂದಿದ್ದರು.

- ವಿಲಿಯಂ ಕೇರಿ ಕೈಕೊಂಡ ಮೊತ್ತ ಮೊದಲಿನ ಕನ್ನಡ ಮೊಳೆಗಳ ತಯಾರಿಕೆಯನ್ನು ಗಿಲ್‌ಕ್ರಿಸ್ತ್ ಎಂಬವನ ತಲೆಗೆ ಕಟ್ಟಿದ್ದಾರೆ.
- ಬೆಂಗಳೂರು ಸರಕಾರಿ ಮುದ್ರಣಾಲಯವು ೧೮೧೫ರಲ್ಲಿ ಸ್ಥಾಪನೆಯಾಯಿತೆಂದೂ ಬಾಸೆಲ್ ಮಿಶನ್ ಪ್ರೆಸ್ ೧೮೩೪ ರಲ್ಲಿ ಸ್ಥಾಪನೆಯಾಯಿತೆಂದೂ ಹೇಳಲಾಗಿದ್ದು, ಅದು ನಿಜವಾಗಿ ಕ್ರಮವಾಗಿ ೧೮೪೧ ಮತ್ತು ೧೮೪೨ನೇ ವರ್ಷ ನಡೆದ ಘಟನೆ.

ಪಾಶ್ಚಾತ್ಯ ಲೇಖಕರ ಕಾಲಾನುಕ್ರಮದ ತಿಳುವಳಿಕೆ ಇಲ್ಲದೆ ಆದ ತಪ್ಪುಗಳು.

- ಬಳ್ಳಾರಿ ಮಿಶನ್ ಕೇಂದ್ರದಲ್ಲಿ ಮೊದಲಿಗೆ ಬಂದವರೀವ್ (೧೮೧೬-೧೮೩೪) ಅನಂತರ ರೀಡ್ (೧೮೩೦-೧೮೪೧) ಆದರೆ ಮುತ್ತಣ್ಣನವರು ಇದನ್ನು ಹಿಂದು ಮುಂದಾಗಿ ದಾಖಲಿಸಿದ್ದಾರೆ.
- ರೀಡ್‌ನಿಂದ ರಚಿತವಾದ ಕನ್ನಡದ ಬೈಬಲ್ ಹೊತ್ತಗೆಗಳು ಹಲವು ಇವೆ ಎನ್ನುತ್ತಾರೆ. ಆದರೆ ಬೈಬಲ್ ಇರುವುದೇ ಒಂದು, ಇನ್ನೊಂದೆಡೆ Dr.Moegling ಸಂಪೂರ್ಣ ಬೈಬಲನ್ನು ಕನ್ನಡದಲ್ಲಿ ಬರೆದ ಎಂದಿದ್ದಾರೆ.ಆದರೆ ವಾಸ್ತವವಾಗಿ ಸಮಗ್ರ ಬೈಬಲನ್ನು ಕನ್ನಡದಲ್ಲಿ ಏಕಮೇವವಾಗಿ ಅನುವಾದಿಸಿದ ಯಾರೊಬ್ಬ ಮಿಶನರಿಯೂ ಹುಟ್ಟಲಿಲ್ಲ.
- ಇನ್ನೊಂದೆಡೆ ಡೆಪ್ಯುಟಿ ಚೆನ್ನಬಸಪ್ಪನನ್ನು ತನ್ನ ಸ್ಥಾನದಲ್ಲಿ ಮೇಲಕ್ಕೆ ಏರಿಸಿ ಪ್ರೋತ್ಸಾಹಿಸಲು ಕಾರಣನಾದನು. ಈ Rev. F. Zeigler ಎಂದು ಬರೆದಿದ್ದಾರೆ. ಕಾಲಮಾನದಲ್ಲಿ ಹೆಚ್ಚು ಕಡಿಮೆಯಾದುದಕ್ಕೆ ಇದೂ ಒಂದು ಮಾದರಿಯಾಗಿದೆ. ಹಾವನೂರರು ಅಧ್ಯಯನದಿಂದ ಕಂಡುಕೊಂಡ ಪ್ರಕಾರ ಈ ತ್ರಿಗ್ಲರ್ ಧಾರವಾಡಕ್ಕೆ ಬರುವುದಕ್ಕೆ ೨೪ ವರ್ಷ ಮುಂಚೆಯೇ ಚೆನ್ನ ಬಸಪ್ಪ ಡೆಪ್ಯೂಟಿ ಎಜ್ಯುಕೇಶನಲ್ ಇನ್‌ಸ್ಪೆಕ್ಟರ್ ಹುದ್ದೆಯನ್ನು ಸ್ವೀಕರಿಸಿದ್ದರು.

ಮುತ್ತಣ್ಣನವರ ಅಸಮಂಜಸವಾದ ಊಹೆಯಿಂದ ನೀಡಿದ ತಪ್ಪು ಮಾಹಿತಿ ಹಲವಿದ್ದು ಅವುಗಳಲ್ಲಿ ಕೆಲವು ಈ ರೀತಿಯಾಗಿದೆ :-

- ವಿಲಿಯಮೆಂಬವನ ಚರಿತೆ ಎಂಬ ೬೯ ಪುಟಗಳ ಪುಸ್ತಕವು ಇಂಗ್ಲೆಂಡಿನ ರಾಜ ಮೊದಲನೇ ವಿಲಿಯಮನನ್ನು ಕುರಿತು ಬರೆದದ್ದೆಂದೂ ಅದನ್ನು ಚರಿತ್ರೆ ಪಾಠಕ್ಕೆ ಉಪಯೋಗಿಸಲಾಯಿತೆಂದು ಬರೆದಿದ್ದಾರೆ. ನಿಜವಾಗಿ ಆ ಪುಸ್ತಕವು ಬೈಬಲಿಗೆ ಸಂಬಂಧಿಸಿದ ಒಂದು ಕಥೆಯಾಗಿದೆ. ಅದೇ ರೀತಿ ಕ್ರೈಸ್ತಮತಕ್ಕೆ ಸಂಬಂಧಿಸಿದ ಕೃತಿಗಳಾದ Bazar Book ನ್ನು Bazar ಪದದ ಆಧಾರದಲ್ಲಿ ಸಂತೆ ಲೆಕ್ಕಗಳ ವ್ಯವಹಾರಗಳನ್ನು ತಿಳಿಸುವ ಪುಸ್ತಕವೆಂದೂ, 'Practical advice against a far spread disease ಮತ್ತು ಫಲಾಹಾರ ಅಥವಾ ಲಕ್ಷ್ಯಕ್ಕೆ ತಕ್ಕವಾದ್ದು' ಎಂಬ ಶೀರ್ಷಿಕೆಗಳನ್ನು ಕಂಡು ಅವು ವೈದ್ಯಕೀಯ ಇಲ್ಲವೇ ಆರೋಗ್ಯಶಾಸ್ತ್ರಕ್ಕೆ ಸಂಬಂಧಿಸಿದ ಪುಸ್ತಕಗಳೆಂದು

ನಿರ್ಧರಿಸಿದ್ದರು.

- 'ಕರ್ನಾಟಕ ವಾಗ್ವಿಧಾಯಿನಿ' ಎಂಬ ಸಾಹಿತ್ಯಿಕ ಪತ್ರಿಕೆಯೊಂದು ಕಳೆದ ಶತಮಾನದಲ್ಲಿ ಹಳೆಯ ಮೈಸೂರಿನ ಪ್ರದೇಶದಿಂದ ಹೊರಡಿತ್ತೆಂದು ಹೇಳಿ ಅದಕ್ಕೆ ಮೊಗ್ಲಿಂಗ್ ಮುಂತಾದ ಪ್ರಮುಖ ಲೇಖಕರ ಹೆಸರನ್ನು ತಳುಕು ಹಾಕಿದ್ದು ವಾಸ್ತವವಾಗಿ ಅದು ವ್ಯಾಕರಣ ಪುಸ್ತಕವಾಗಿದ್ದಿತು.
- ಮೊಗ್ಲಿಂಗ್ ದಾಸರ ಪದಗಳನ್ನು ಮತ್ತು ಜೈಮಿನಿ ಭಾರತದ ಕೆಲವು ಪದ್ಯಗಳನ್ನು ಜರ್ಮನ್ ಭಾಷೆಗೆ ಅನುವಾದಿಸಿದ್ದನು. ಅವುಗಳಲ್ಲಿ ದಾಸರ ಪದಗಳು ಸುಪ್ರಸಿದ್ಧ ZDMG ಪತ್ರಿಕೆಯ ೧೮೬೦ನೇ ಇಸವಿಯಲ್ಲಿ ಸಂಪುಟದ ೫೦೨ ರಿಂದ ೫೧೬ರ ವರೆಗಿನ ಪುಟಗಳಲ್ಲಿ ಹಾಗೂ ೧೮೬೪ರ ಸಂಪುಟದ ೨೪೧–೨೬೧ರ ಪುಟದಲ್ಲಿ ಪ್ರಕಟವಾಗಿತ್ತು ಹಾಗೂ ಜೈಮಿನಿ ಭಾರತದ ಪದ್ಯಗಳು ೨೪ನೇ ಸಂಪುಟದ ೩೮೯ ರಿಂದ ೩೨೪ರ ವರೆಗಿನ ಪುಟಗಳಲ್ಲಿ ಪ್ರಕಟವಾಗಿತ್ತು. ಆದರೆ ಮುತ್ತಣ್ಣನವರು ತಪ್ಪಾಗಿ ತಿಳಿದು ೫೧೬ ಪುಟಗಳ ದಾಸರ ಪದಗಳ ಗ್ರಂಥ ಮತ್ತು ೩೨೪ ಪುಟಗಳ ಜೈಮಿನಿ ಭಾರತ ಗ್ರಂಥವೇ ಜರ್ಮನ್ ಭಾಷೆಯಲ್ಲಿ ಮುದ್ರಣವಾಯಿತೆಂದು ಬರೆದಿದ್ದಾರೆ.

ಮುತ್ತಣ್ಣನವರು ೧೯ನೇ ಶತಮಾನದ ಲೇಖಕರ ಸಾಹಿತ್ಯಿಕ ಪರಿಚಯವನ್ನು ಸಹ ತಪ್ಪಾಗಿ ನೀಡಿರುವುದನ್ನು ಈ ಕೆಳಗಿನ ಅಂಶಗಳಿಂದ ಸಾಬೀತಾಗುತ್ತದೆ.

ಇಲ್ಲಿಗೆ ಬಂದ ಮಿಶನರಿಗಳೆಲ್ಲಾ ನಿಸ್ಸಂಶಯವಾಗಿ ಭಾಷಾಕೋವಿದರೆಂದು ಮುತ್ತಣ್ಣನವರು ಗ್ರಹಿಸಿ, ಅವರ ಕೊರಳಿಗೆ ೪–೫ ಭಾಷೆಗಳನ್ನು ಕಟ್ಟಿದ್ದಾರೆ. ಅವರ ಪ್ರಕಾರ ಈ ದೇಶಕ್ಕೆ ಬಂದ ಕೂಡಲೇ ಹ್ಯಾಂಡ್ಸ್ ತಮಿಳು, ತೆಲುಗು, ಸಂಸ್ಕೃತ, ಪರ್ಷಿಯನ್ ಇತ್ಯಾದಿ ಭಾಷೆಗಳಲ್ಲೂ ರೈಸ್, ತಮಿಳು, ಕನ್ನಡ, ತೆಲುಗು ಸಂಸ್ಕೃತ, ಪರ್ಷಿಯನ್ ಲ್ಯಾಟಿನ್ ಮತ್ತು ಜರ್ಮನ್ ಭಾಷೆಗಳಲ್ಲೂ ಕಿಟೆಲ್ ಸಂಸ್ಕೃತ, ಕನ್ನಡ, ತಮಿಳು, ತುಳು, ಕೊಂಕಣಿ, ಮರಾಠಿ ಮತ್ತು ಪರ್ಷಿಯನ್ ಭಾಷೆಗಳನ್ನು ಕಲಿತು ಪಾಂಡಿತ್ಯವನ್ನು ಗಳಿಸಿಕೊಂಡಿದ್ದರು.

ಈ ಮೇಲಿನ ಮಿಶನರಿಗಳನ್ನು ಮತ್ತು ಅವರ ಕೃತಿಗಳನ್ನು ಕೂಲಂಕಷವಾಗಿ ಅಧ್ಯಯನ ನಡೆಸಿದಾಗ ಕಿಟೆಲ್‌ಗೆ ಮೇಲೆ ಹೇಳಿದ ಕೆಲವು ಭಾಷೆಗಳಲ್ಲಿ ಪರಿಣತಿಯೂ ಇನ್ನು ಕೆಲವಲ್ಲಿ ವ್ಯಾವಹಾರಿಕ ಜ್ಞಾನವಿದ್ದುದು ಸಾಬೀತಾದರೂ ಅವೆಲ್ಲವುಗಳಲ್ಲಿ ಏಕಸಮಾನವಾದ ಪಾಂಡಿತ್ಯವಿರಲಿಲ್ಲ. 'ಹ್ಯಾಂಡ್ಸ್' ಅಂತೂ ಭಾಷಾ ಪರಿಣತನಾಗಿರಲಿಲ್ಲ. ಅವನು ಅನುವಾದಿಸಿದ ಬೈಬಲ್ ಅದಕ್ಕೆ ಸಾಕ್ಷಿಯಾಗಿದೆ.

ವಿದೇಶಿಯರ ತಾಯಿನಾಡನ್ನು ಸಹ ತಪ್ಪಾಗಿ ತಿಳಿದುಕೊಂಡಿದ್ದ ಮುತ್ತಣ್ಣನವರು ಇಂಗ್ಲೆಂಡಿನವನಾದ ರೈಸ್‌ನನ್ನು, ಫ್ರಾನ್ಸಿನ ಬೌತಲೋನನ್ನು ಮತ್ತು ಸಮಗ್ರ ವೆಸ್ಲೆಯನ್ನರನ್ನು ಜರ್ಮನ್ ದೇಶದವರೆಂದು ಗುರುತಿಸಿದ್ದಾರೆ.

ರೈಸ್ ಎನ್ನುವವರು ಕರ್ನಾಟಕದಲ್ಲಿ ಮೂವರು ಆಗಿ ಹೋದರು. ಒಬ್ಬನು ಮಿಶನರಿಯಾಗಿ ಹಾಗೂ ಕ್ರೈಸ್ತ ಮತೀಯ ಪುಸ್ತಕಗಳು, ಪತ್ರಗಳು ಮತ್ತು ಅರುಣೋದಯ ಪತ್ರಿಕೆಗಳನ್ನು ಪ್ರಕಟಿಸಿದ ಬೆಂಜಮಿನ್ ಹೋಲ್ಟ್ ರೈಸ್ ಇನ್ನು ಈತನ ಇಬ್ಬರು ಮಕ್ಕಳಾದ ಬಿ. ಲೂಯಿ ರೈಸ್ ಮತ್ತು ಇ.ಪಿ.ರೈಸ್. ಮುತ್ತಣ್ಣನವರು ಈ ತಂದೆ–ಮಕ್ಕಳಿಬ್ಬರ ಸಾಹಿತ್ಯಿಕ

ಕಾರ್ಯವನ್ನು ಒಂದೇ ವ್ಯಕ್ತಿಯಲ್ಲಿ ಆರೋಪಿಸಿ, ವಿಷಯದ ಕಲಸು ಮೇಲೋಗರ ಮಾಡಿದ್ದಾರೆ. ಅಲ್ಲದೆ ರೈಸನ ಎಫಿಗ್ರಾಫಿಯಾ ಕರ್ನಾಟಿಕಾ, ಮೈಸೂರು ಗಜೆಟಿಯರ್ ಇವುಗಳು ಪ್ರತ್ಯೇಕ ಕೃತಿಗಳೆಂದು ತಿಳಿಯದಾಗಿದ್ದಾರೆ. ಲೂಯಿರೈಸರು ಸಿದ್ಧಪಡಿಸಿದ Catalogue of Sankrit Manuscripts ನ್ನು 'ಸಂಸ್ಕೃತ ಶಾಸನಗಳು' ಎಂದು ಭಾವಿಸಿ ಅದರಲ್ಲಿ "ಓಲೆಗಳು, ಶಿಲಾ ಶಾಸನಗಳು ಮತ್ತಿತರ ಶಿಲಾವಟ್ಟುಗಳಿವೆ ಎಂದು ಹೇಳಿದ್ದಾರೆ.

ಕೆಲವು ದೇಶೀಯರ ಸಾಹಿತ್ಯ ಕಾರ್ಯದ ಬಗ್ಗೆ ಹೇಳುವಾಗ ಅಳಿಯ ರಂಗರಾಜನ ಕುರಿತಾದ ಪ್ರಸ್ತಾಪವನ್ನು ಡಾ॥ ಹಾವನೂರರು ಹೀಗೆ ನೆನಪಿಸುತ್ತಾರೆ.

"ಕವಿ ಕೃಷ್ಣರಾಜನೆಂಬವನು ಮೈಸೂರು ರಾಜವಂಶಕ್ಕೆ ಸೇರಿದವನಾಗಿರಬಹುದು. ಅದೇ ಸಮಯದಲ್ಲಿ ಅವನ ಸಮಕಾಲೀನನಾಗಿದ್ದ ಕವಿ ಲಿಂಗರಾಜನೂ ಹಲವು ವಿಚಾರ ಪೂರ್ಣವಾದ ಕಿರು ಹೊತ್ತಗೆಗಳನ್ನು ಬರೆದಿದ್ದಾನೆ. ಇವನನ್ನು ಪೂರ್ಣಯ್ಯನ ನಂತರ ಮೈಸೂರು ಮುಖ್ಯಮಂತ್ರಿಯಾಗಿದ್ದ ಲಿಂಗರಾಜನೆಂದು ಕೆಲವರು ಹೇಳಿದರೆ ಇನ್ನು ಕೆಲವರು ಕಳೆದ ಶತಮಾನಾರಂಭದಲ್ಲಿ ಕೊಡಗಿನ ಅರಸನಾಗಿದ್ದ ೨ನೇ ಲಿಂಗರಾಜನೆಂದು ಹೇಳಿದ್ದಾರೆ. ಆದರೆ ಮೈಸೂರಿನ ಮುಖ್ಯಮಂತ್ರಿಯಾಗಿದ್ದ ಆ ಲಿಂಗರಾಜನು ಕೇವಲ ಅಸಭ್ಯ ಮತ್ತು ಅಸಂಸ್ಕೃತನಾದ ವ್ಯಕ್ತಿಯಾಗಿದ್ದನೆಂದು ಆಧಾರ ಪೂರ್ವಕವಾಗಿ ತಿಳಿದುಬರುತ್ತದೆ".

ಈ ಹೇಳಿಕೆ ಖಂಡಿಸುವುದಕ್ಕೆ ಯೋಗ್ಯವಾಗಿಲ್ಲ ಎಂದು ಹಾವನೂರರು ಸುಮ್ಮನಾಗಿದ್ದಾರೆ. ಅತ್ಯುಕ್ತಿಯು ಈ ಗ್ರಂಥದ ಇನ್ನೊಂದು ವೈಶಿಷ್ಟ್ಯವಾಗಿದ್ದು ಅದನ್ನು ಈ ರೀತಿಯಾಗಿ ಪಟ್ಟಿ ಮಾಡಲಾಗಿದೆ.

"ಕಾಲಿನ್ ಮೆಕೆಂಝಿಯ ಸಂಶೋಧನಾ ವರದಿಗಳು ನೂರಾರು ಗ್ರಂಥ ಕಾಂಡಗಳಾಗಿವೆ"

"ವಿಲಿಯಂ ಕೇರಿಯು ೧೫೦ ಗ್ರಂಥಗಳನ್ನು ಬರೆದನು."

"ವಿಲಿಯಂ ಕೇರಿಯು ಎಷ್ಟು ಪುಸ್ತಕಗಳನ್ನು ಬರೆದನೋ ಅಷ್ಟೇ ಪುಸ್ತಕಗಳು ಅವನ ವಿಷಯವಾಗಿ ಬರೆಯಲ್ಪಟ್ಟಿದೆ"

"ಇವರೆಲ್ಲರ ಈ ಅನ್ವೇಷಣೆಯ ಪರಿಣಾಮವಾಗಿ ಕನ್ನಡನಾಡಿನ ಯಾವೊಂದು ಪುರಾತನ ಶಾಸನವೂ ಅವರ ದೃಷ್ಟಿಯಿಂದ ಪಾರಾಗಲಿಲ್ಲ."

"ಕನ್ನಡ ಭಾಷೆ ಮತ್ತು ನಾಡಿನ ವಿವಿಧ ವಿಚಾರಗಳನ್ನು ಕುರಿತು ಪಾಶ್ಚಾತ್ಯ ಭಾಷೆಗಳಲ್ಲಿ ಬರೆದಿರುವ ಗ್ರಂಥಗಳ ಸಂಖ್ಯೆ ಒಟ್ಟಾಗಿ ೩೦ ಸಾವಿರದಷ್ಟಾದರೂ ಇದೆ".

"ಕನ್ನಡ ಭಾಷೆಯೊಂದರಲ್ಲೇ ಸು.೨೫೦೦ರಷ್ಟು ಬೈಬಲ್ ಕೃತಿಗಳು, ಸೂಕ್ತಿಗಳು ಬರೆಯಲ್ಪಟ್ಟಿದೆ.

ಮುಂದಕ್ಕೆ ಪಾಶ್ಚಾತ್ಯರನ್ನು ಹೊಗಳುವ ಭರದಲ್ಲಿ ದೇಶದ ಸಂಸ್ಕೃತಿಯನ್ನು ಮರೆತದ್ದನ್ನು ಹಾವನೂರರು ಗುರುತಿಸುತ್ತಾ ಹೋಗುತ್ತಾರೆ, ಅದರ ಪ್ರಕಾರ

"ಧರ್ಮಸಂಸ್ಥಾಪನಾಯ ಸಂಭವಾಮಿ ಯುಗೇ ಯುಗೇ ಎಂದು ಹೇಳಿದ ಭಗವಂತನು ಹಲವು ವಿಧಗಳಲ್ಲಿ ಬಂದು ಹೋದನೆಂಬುದು ನ್ಯಾಯವಾದ ಕಥೆಯೇ ಆಗಿದೆ ಎಂದು ಆರಂಭಿಸಿ, ಮುಂದಕ್ಕೆ ಶಿಥಿಲವಾಗುತ್ತಿದ್ದ ಹಿಂದೂ ಧರ್ಮ, ಸಂಸ್ಕೃತಿ, ಸಾಹಿತ್ಯಗಳನ್ನೆಲ್ಲವನ್ನು

ಉಳಿಸಲು...೨೦೦ ವರ್ಷಗಳ ಕಾಲ ಇದ್ದು ಹಿಂದೆರಳಿದ ಪಾಶ್ಚಾತ್ಯನು ಏಕದಶಾವತಾರಿ ಎನ್ನುತ್ತಾರೆ. ಮುಂದುವರಿದು ಅಳಿದುಳಿದ ನಮ್ಮ ಪ್ರಾಚೀನ, ಐತಿಹಾಸಿಕ, ವಾಸ್ತುಶಿಲ್ಪ ಮತ್ತು ಸಾಹಿತ್ಯಾದಿ ಕುರುಹುಗಳನ್ನು ಉಳಿಸಲು ದೇವದೂತನಂತೆ ಬಂದರೆಂದೂ ರಾ. ನರಸಿಂಹಾಚಾರ್ಯನ, 'ಕವಿಚರಿತೆ' ಆಲೂರು ವೆಂಕಟರಾಯನ 'ಕರ್ನಾಟಕ ಗತ ವೈಭವ' ಗೋವಿಂದ ಪೈಯ 'ಕವಿಕಾಲ ವಿಮರ್ಶೆ' ಇತ್ಯಾದಿಗಳು ಅವರು ಹೇಳಿದ್ದರ ಮೇಲೆ ಕಟ್ಟಿದ ಭವ್ಯಕೋಟೆಗಳಲ್ಲದೆ ತಾವಾಗಿ ಯಾವ ಸಂಶೋಧನೆ ಮಾಡಿಲ್ಲವೆಂದೂ ಹೇಳಿದ್ದಾರೆ. ಮಾತ್ರವಲ್ಲ ಬ್ರಿಟಿಷರು ಇನ್ನೊಂದು ಅರ್ಧಶತಮಾನ ಈ ದೇಶದಲ್ಲಿ ಉಳಿದಿದ್ದರೆ ನಮ್ಮಲ್ಲಿ ಈಗಿರುವ ಜಾತಿಭೇಧ, ಜನಭೇದ ಎಲ್ಲವನ್ನು ಕಿತ್ತೊಗೆಯುತ್ತಿದ್ದರೆಂದೂ ಹೇಳಿದ್ದಾರೆ.

ಹಾವನೂರರ ಅಭಿಪ್ರಾಯದಂತೆ, ಪಾಶ್ಚಾತ್ಯರಿಂದಲೇ ನಮ್ಮ ಉದ್ಧಾರವಾಯಿತು ಎಂದು ಹೇಳುವ ಅವಸರದಲ್ಲಿ ಭಾರತೀಯ ಜನ, ಆಚಾರ, ವಿಚಾರ, ವಿದ್ಯೆ, ಸಾಹಿತ್ಯಿಕ ಕಾರ್ಯ ಇವನ್ನು ಅತ್ಯಂತ ಹೀನಾಯವಾಗಿ ಕಾಣಲಾಗಿದೆ. ಡಾ| ಹಾವನೂರರ ದಾಖಲೆ ಸಹಿತವಾದ ಈ ವಿಮರ್ಶೆಯು ದಾರಿತಪ್ಪಿಸುವ ಅಪದ್ಧ ಕೃತಿಯೊಂದರ ಬಗ್ಗೆ ತಿಳುವಳಿಕೆ ಮೂಡಿಸಿದ್ದು ಸಾಹಿತ್ಯ ಲೋಕಕ್ಕೆ ಸಂಶೋಧನ ಲೋಕಕ್ಕೆ ಆರೋಗ್ಯ ಪೂರ್ಣ ಬೆಳವಣಿಗೆಯಾಗಿದೆ.

## 'ಹೊಸಗನ್ನಡದ ಅರುಣೋದಯ'ದ ಬೆಳಕಿನಲ್ಲಿ

ಹೊಸಗನ್ನಡದ ಅರುಣೋದಯ ಡಾ। ಶ್ರೀನಿವಾಸ ಹಾವನೂರರಿಗೆ ಪೂನಾ ವಿಶ್ವವಿದ್ಯಾನಿಲಯದಿಂದ ಪಿಹೆಚ್.ಡಿ. ಪದವಿಯನ್ನು ಒದಗಿಸಿದ ಸಂಶೋಧಿತ ನಿಬಂಧ. ಅವರ ದಣಿವರಿಯದ ದುಡಿಮೆ, ಚಿಕಿತ್ಸಕ ದೃಷ್ಟಿಕೋನದ ಫಲಶೃತಿಯಾದ ಈ ಮೌಲಿಕ ಕೃತಿಯು ೧೯ನೇ ಶತನಮಾನದ ಕನ್ನಡ ಸಾಹಿತ್ಯ ಚಟುವಟಿಕೆಗಳ ಕೈಗನ್ನಡಿ.

ಹತ್ತೊಂಭತ್ತನೆಯ ಶತಮಾನವೆಂಬುದು ಭಾರತದ ಸಮಗ್ರ ಇತಿಹಾಸದಲ್ಲಿ ಸ್ಥಿತ್ಯಂತರದ ಕಾಲ. ಪಾಶ್ಚಾತ್ಯ ಮತ್ತು ಸಾಂಪ್ರದಾಯಿಕ ನಂಬಿಕೆ ನಡವಳಿಕೆಗಳ ನಡುವಿನ ಸಂಘರ್ಷದ, ಕ್ರಿಯೆ– ಪ್ರತಿಕ್ರಿಯೆಗಳ ಕಾಲಘಟ್ಟವಾಗಿದ್ದಿತು. ಸಾಹಿತ್ಯವು ಈ ಸಂಕ್ರಮಣ ಸ್ಥಿತಿಯಿಂದ ಮುಕ್ತವಾಗಿರಲಿಲ್ಲ. ಸಾಹಿತ್ಯವು ತನ್ನ ಪ್ರಾಚೀನ ಮಡಿಮೈಲಿಗೆಯನ್ನು ಬಿಟ್ಟು ಹೊಸ ಅವಕಾಶದತ್ತ, ಸಾಧ್ಯತೆಯತ್ತ ತನ್ನನ್ನು ತಾನು ತೆರೆದುಕೊಂಡಿತು. ಧರ್ಮದೇವರುಗಳ ಸುತ್ತ ಸುತ್ತುತ್ತಿದ್ದ ಸಾಹಿತ್ಯ ಮಾನವಕೇಂದ್ರಿತವಾಯಿತು. ತನ್ನ ದೈನಂದಿನ ಸುಖ ದುಃಖಗಳಿಗೂ ಅಕ್ಷರದ ರೂಪ ಕೊಡಬಹುದೆಂಬ ಅರಿವು ಮೂಡಿತು. ಇದಕ್ಕೆ ಸರಳವಾದ ಗದ್ಯ ಪ್ರಕಾರ ಮಾಧ್ಯಮವಾಯಿತು. ಮುದ್ರಣ ಯಂತ್ರ ಬಂದು ಸಾಹಿತ್ಯ ಲೋಕದಲ್ಲೇ ಕ್ರಾಂತಿಯಾಯಿತು. ಬೃಹದ್ಗ್ರಂಥಗಳ ಜೊತೆಗೆ ನಿಯತಕಾಲಿಕೆಗಳು, ಪತ್ರಿಕೆಗಳು ಹೊರಡಲಾರಂಭಿಸಿದವು. ಸಾಹಿತ್ಯವು ಜನಸಾಮಾನ್ಯರ ಸ್ವತ್ತಾಯಿತು. ಸ್ವಲ್ಪ ತಡವಾಗಿಯಾದರೂ ಈ ಹೊಸಗಾಳಿ ಕನ್ನಡ ಸಾಹಿತ್ಯದ ಕಡೆಗೂ ಬೀಸಲಾರಂಭಿಸಿತು. ಇದು ಆಧುನಿಕ ಕನ್ನಡ ಸಾಹಿತ್ಯದ ಉದಯರಾಗವಾಗಿತ್ತು.

ಕನ್ನಡ ಸಾಹಿತ್ಯ ಚರಿತ್ರೆಯನ್ನು ಸ್ಥೂಲವಾಗಿ ಹಳೆಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂಬುದಾಗಿ ವಿಭಾಗಿಸಿದಾಗ; ನಡುಗನ್ನಡ ಮತ್ತು ಹೊಸಗನ್ನಡದ ನಡುವಿನ ಸ್ಥಿತ್ಯಂತರದ ಕಾಲವೇ ಅರುಣೋದಯದ ಕಾಲ.

"ಆ ಕಾಲದ ಸಾಹಿತ್ಯ ಇತಿಹಾಸವನ್ನು ರಚಿಸಲು ಮಾತ್ರ ಇದುವರೆಗೂ ಯಾರೂ ಮುಂದೆ ಬಾರದಿದ್ದುದು ವ್ಯಥೆಯ ಮಾತಾದರೂ ಆಶ್ಚರ್ಯ

ಎನಿಸುವುದಿಲ್ಲ. ಏಕೆಂದರೆ ಈ ಶತಮಾನದ ವೈವಿಧ್ಯ ವಿಸ್ತಾರಗಳನ್ನು, ಇತಿಹಾಸ ನಿರೂಪಣೆಗೆ ಅಗತ್ಯವಾದ ಆಕರಗಳ ಕೊರತೆಯನ್ನು ಬಲ್ಲ ಯಾರಿಗೇ ಆದರೂ ಆ ಕೆಲಸಕ್ಕೆ ಕೈ ಹಾಕಲು ಹೆಚ್ಚಿನ ಧೈರ್ಯ ತಾಳ್ಮೆಗಳು ಇರಬೇಕೆನ್ನುವುದು ಸ್ಪಷ್ಟವಾಗಿತ್ತು. ಸಂಶೋಧನೆಯಲ್ಲಿ ದಿಢೀರ್ ಖ್ಯಾತಿಯನ್ನು ಶೀಘ್ರ ಪ್ರತಿಫಲವನ್ನು ಬಯಸುವ ಯಾರೇ ಆದರೂ ಈ ವಿಷಯವನ್ನು ಆಯ್ದುಕೊಳ್ಳುವುದು ಸಾಧ್ಯವಿರಲಿಲ್ಲ. ಈ ಬಗೆಯ ಸಂಶೋಧನೆಗೆ ಅಗತ್ಯವಾದ ಅನುಕೂಲ ಅವಕಾಶಗಳು ನಮ್ಮಲ್ಲಿಲ್ಲ. ದೊಡ್ಡ ಅಡಚಣೆ ಎಂದರೆ ಆಕರ ಸಾಮಾಗ್ರಿಯ ಕೊರತೆ"[೧].

ಅಪಾರವಾದ ಸಾಧ್ಯತೆಗಳನ್ನು ಮೈಗೂಡಿಸಿಕೊಂಡಿರುವ ಹೊಸಗನ್ನಡದ ಮೊದಲ ಹೆಜ್ಜೆಯನ್ನು ಬೆಳಕು ಹರಿಯುವ ಪೂರ್ವಕಾಲವಾದ ಅರುಣೋದಯವೆಂದು ಕರೆದಿರುವುದು ಅತ್ಯಂತ ಸಮಂಜಸವೇ ಆಗಿದೆ. ಈ ಕಾಲಘಟ್ಟದಲ್ಲಿ ಏನೇನು ಕೆಲಸಗಳು ಆಗಿದೆ ಎಂದು ಅರಿಯುವ ಗೋಜಿಗೆ ಹೋಗದೆ ದೂರದಿಂದಲೇ ಅಜ್ಞಾತ ಕಾಲವೆಂದೇ ಕರೆಯುತ್ತಿದ್ದಾಗ ಧೈರ್ಯದಿಂದ ಸಾಹಸಕ್ಕೆ ಮುನ್ನುಗ್ಗಿ ಬೆಳಕನ್ನು ಅರಳಿಸಿದ ಸಾಧನೆ ಹಾವನೂರರದು. "ಸೂರ್ಯೋದಯವನ್ನು ಬಹಳ ಜನ ಕಾಣಬಲ್ಲರು, ಸವಿಯಬಲ್ಲರು, ವರ್ಣಿಸಬಲ್ಲರು. ಆದರೆ ಪೂರ್ವಭಾವಿಯಾಗಿ ಮೂಡಿದ ಅರುಣೋದಯದ ಸೌಂದರ್ಯ ವ್ಯಾಪ್ತಿ ಮತ್ತು ಪರಿಣಾಮಗಳನ್ನು ಬಹಳ ಜನ ಗಮಸುವುದಿಲ್ಲ. ಇಂತಹ ಹೊಸಗನ್ನಡದ ಸಾಹಿತ್ಯದ ಸಂಪದ್ಭರಿತ ಬೆಳಸಿಗೆ ಬುನಾದಿಯನ್ನು ಕಲ್ಪಿಸಿಕೊಟ್ಟ ಅರುಣೋದಯದ ಕಾಲದ ಚಟುವಟಿಕೆಗಳನ್ನು ಪ್ರಾಮಾಣಿಕವಾಗಿ ಮತ್ತು ಸಮರ್ಥವಾಗಿ ದಾಖಲಿಸಿರುವ ಈ ಗ್ರಂಥವು ಇನ್ನು ಮುಂದೂ ಸಾಹಿತ್ಯ ವ್ಯಾಸಂಗಿಗಳಿಗೆ ಒಂದು ಮಹತ್ತಾದ ಆಕರ ಗ್ರಂಥವಾಗಿದೆ"[೨].

ಡಾ। ಹಾವನೂರರು ಬ್ರಿಟಿಷ್ ಮ್ಯೂಸಿಯಂನಲ್ಲಿರುವ ಕನ್ನಡ ಪುಸ್ತಕಗಳ ಸೂಚಿಯನ್ನು ಪರಿಶೀಲಿಸುವಾಗ ಎಲ್.ಡಿ ಬಾರ್ನೆಟ್ ಎಂಬ ಪಾಶ್ಚಾತ್ಯ ವಿದ್ವಾಂಸರು ಸಂಪಾದಿಸಿದ್ದ ಮತ್ತು ೧೯೧೦ರಲ್ಲಿ ಲಂಡನ್ನಿನ ವಸ್ತು ಸಂಗ್ರಹಾಲಯದಿಂದ ಹೊರಬಂದಿದ್ದ 'Catalogue of the Kannada, Badaga and kurg Books in the Library of the British Museum'ಎಂಬ ಕೃತಿ ಅವರ ಗಮನಕ್ಕೆ ಬಂತು.

ಇದರಿಂದಾಗಿ 'ಅಜ್ಞಾತಕಾಲಖಂಡ' 'ಅನುಕರಣೀಯ ಯುಗ' ಎಂಬ ಅಪಪ್ರಥೆಗೆ ಒಳಗಾಗಿದ್ದ ೧೯ನೇ ಶತಮಾನದಲ್ಲಿ ವೈವಿಧ್ಯಮಯವಾದ ಸಾಹಿತ್ಯ ನಿರ್ಮಾಣವಾಗಿದೆಯೆಂಬ ಸತ್ಯ ಗಮನಕ್ಕೆ ಬಂತು ಮತ್ತು ಆ ಕಾಲದ ಸಾಹಿತ್ಯ ಚರಿತ್ರೆಯ ಅಧ್ಯಯನಕ್ಕೆ ಪ್ರೇರಣೆಯನ್ನು ಒದಗಿಸಿತು. ಆದರೆ ಅದೊಂದು ಸವಾಲು ಕೂಡ ಆಗಿದ್ದು ಆ ಶತಮಾನಗಳ ಪ್ರಕಟಿತ ಕೃತಿಗಳ ಮತ್ತು ಕರ್ತೃಗಳ ಮಾಹಿತಿಯನ್ನು ಕಲೆಹಾಕುವುದು ಬಹಳ ಕಷ್ಟಕರವಾಗಿತ್ತು. ಎಷ್ಟೊ ವಿಷಯಗಳನ್ನು ವಿದೇಶಗಳು ಅಂದರೆ ಲಂಡನ್ ಮತ್ತು ಬಾಸೆಲ್‌ಗಳಿಂದ

---

೧. ಡಾ.ಹಾ.ಮಾ.ನಾ – ಹೊಸಗನ್ನಡದ ಅರುಣೋದಯ – ಮುನ್ನುಡಿ ಪೂರ್ವೋಕ್ತ ಪುಟ X

೨. ಡಾ.ಎಚ್ ಲಕ್ಕಪ್ಪ ಗೌಡ – ಹೊಸಗನ್ನಡದ ಅರುಣೋದಯ – ಮುನ್ನುಡಿ ಪೂರ್ವೋಕ್ತ ಪುಟ VII

ಸಂಗ್ರಹಿಸಬೇಕಾಗಿತ್ತು ಅಲ್ಲದೆ ನಾಡಿನ ಮೂಲೆ ಮೂಲೆಗಳಿಂದಲೂ ಸಂಗ್ರಹಿಸಬೇಕಿದ್ದಿತು. ಆ ಕಾಲದ ದಾಖಲೆ, ವರದಿ ಹಸ್ತಪ್ರತಿಗಳಿಗಾಗಿ ಅವ್ಯಾಹತವಾದ ಪ್ರಯಾಣ, ಪತ್ರ ವ್ಯವಹಾರಗಳನ್ನು ಮಾಡಬೇಕಾಗಿತ್ತು. ವರ್ಷಾನುಗಟ್ಟಲೆ ಮಾಹಿತಿ ಸಂಗ್ರಹಕ್ಕಾಗಿ ದುಡಿಯಬೇಕಾಗಿತ್ತು. ಅಂತೂ ಅನೇಕ ವರ್ಷ ತಾಳ್ಮೆಯಿಂದ ಕೆಲಸ ಮಾಡಿ ದುರ್ಲಭವಾದ ಮಾಹಿತಿಯನ್ನು ಸಂಗ್ರಹಿಸಿ ಆಕರಗಳನ್ನು ಕಲೆಹಾಕಿ ಮೊದಲಬಾರಿಗೆ ೧೯ನೇ ಶತಮಾನದ ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ಬೆಳಕಿಗೆ ತಂದಿದ್ದಾರೆ. ಸುಮಾರು ೭೦೦ ಪುಟಗಳಿರುವ ಬೃಹತ್‌ಗ್ರಂಥವು ಡಾ। ಹಾವನೂರರ ಚಿಂತನಶೀಲತೆ, ವಿಚಾರಶೀಲ ಬುದ್ಧಿಮತ್ತೆಗೆ, ವೈಜ್ಞಾನಿಕವಾದ ದೃಷ್ಟಿಕೋನಕ್ಕೆ. ಇತಿಹಾಸ ನಿಷ್ಠತೆಗೆ ನಿದರ್ಶನವಾಗಿದ್ದು ಇದನ್ನು ಪೂರ್ವಾರ್ಧ ಮತ್ತು ಉತ್ತರಾರ್ಧವೆಂದು ವಿಭಾಗಿಸಲಾಗಿದೆ. ಪೂರ್ವಾರ್ಧದಲ್ಲಿ ಅರುಣೋದಯದ ಹಿನ್ನೆಲೆಯನ್ನು ಪ್ರಸ್ತಾಪಿಸಿ ಮುದ್ರಣ, ಇಂಗ್ಲಿಷ್ ಶಿಕ್ಷಣ, ಕ್ರೈಸ್ತ ಮತ ಪ್ರಸಾರ ಇದರಿಂದ ಹಬ್ಬಿದ ಪಾಶ್ಚಾತ್ಯ ಪ್ರಭಾವ, ಸಾಹಿತ್ಯ ಸಾಧಕರಾದ ಮಿಶನರಿಗಳು, ಬ್ರಿಟಿಷ್ ಅಧಿಕಾರಿಗಳು, ದೇಶೀಯ ವಿದ್ಯಾವಂತರು, ದೇಶೀಯ ಧಾರ್ಮಿಕ ವಾಙ್ಮಯಕಾರರು ಇತ್ಯಾದಿ ಅಂಶಗಳಿವೆ. ಉತ್ತಾರಾರ್ಧದಲ್ಲಿ ಆ ಕಾಲದ ಪ್ರಮುಖ ಗ್ರಂಥಗಳ ಸಮೀಕ್ಷೆ ಇದ್ದು ಇದರಲ್ಲಿ ಅಂದಿನ ಕೋಶ, ವ್ಯಾಕರಣ ಗ್ರಂಥಗಳು ಸೃಜನಶೀಲ ಸಾಹಿತ್ಯಗಳಾದ ಕವಿತೆ, ನಾಟಕ, ಕಾದಂಬರಿ ಮತ್ತು ಪತ್ರಿಕೋದ್ಯಮದ ಪರಿಚಯವನ್ನು ನೀಡಲಾಗಿದೆ. ಹಾವನೂರರು ಹೊಸಗನ್ನಡದ ಅರುಣೋದಯದ ಕಾಲವನ್ನು ಗದ್ಯದಲ್ಲಿ ಬೈಬಲ್‌ನ ಭಾಷಾಂತರವನ್ನು ಪ್ರಕಟಿಸಿದ ಜಾನ್ ಹ್ಯಾಂಡ್ಸ್ ಬಳ್ಳಾರಿಗೆ ಬಂದ ೧೮೧೦ನೇ ವರ್ಷದಿಂದ ಕನ್ನಡದ ಮೊದಲ ಸ್ವತಂತ್ರ ಸಾಮಾಜಿಕ ಕಾದಂಬರಿ ಎನಿಸಿದ 'ಇಂದಿರಾಬಾಯಿ' ಹೊರಬಂದ ೧೮೯೯ನೇ ವರ್ಷದವರೆಗೆ ಗಣನೆಗೆ ತೆಗೆದುಕೊಂಡಿದ್ದಾರೆ. ಈ ಸಂದರ್ಭದಲ್ಲಿ ನಾವು ಹಾವನೂರರ ಈ ನಿವೇದನೆಯನ್ನು ಅವಶ್ಯವಾಗಿ ಗಮನಿಸಬೇಕು. "೧೯೦೦ ರಿಂದ ಮುಂದೆ ಕೈಲಾಸಂ, ಮಾಸ್ತಿ, ಕಾರಂತ, ಆನಂದಕಂದ ಮುಂತಾದವರು ನಾಟಕ, ಕಥೆ, ಕಾದಂಬರಿಗಳನ್ನು ಬರೆಯತೊಡಗಿದ ನವೋದಯದ ಕಾಲಾವಧಿಯ (೧೯೨೦) ಹೊಸಗನ್ನಡ ವಾಙ್ಮಯ ಅಧ್ಯಯನವನ್ನು ಯಾರಾದರೂ ಮುಂದುವರಿಸಬಹುದಾಗಿದೆ. ಹೀಗೆ ಸೂಚಿಸುವುದಕ್ಕೆ ಇನ್ನೊಂದು ಕಾರಣವಿದೆ. ಇದರಲ್ಲಿ ಉಕ್ತರಾದ ಕೆಲವು ಲೇಖಕರು ೧೯ನೇ ಶತಮಾನದ ಕೊನೆಯಲ್ಲಿ ಪ್ರಾರಂಭಿಸಿ ಮುಂದಿನ ಶತಮಾನದ ಆರಂಭದಲ್ಲಿ ಸಹ ಕಾರ್ಯವೆಸಗಿದ್ದಾರೆ. ಆದರೆ ೧೯೦೦ನೇ ವರ್ಷದ ಹೊಸ್ತಿಲ ಗೆರೆಯನ್ನು ದಾಟಬಾರದೆಂಬ ಸ್ವಾನಿರ್ಭಂಧದಿಂದ ಎಂ.ಎಸ್.ಪುಟ್ಟಣ್ಣ, ಬಿ.ವೆಂಕಟಾಚಾರ್ಯ, ಗಳಗನಾಥ, ಬೆನಗಲ್ ರಾಮರಾವ್ ಮುಂತಾದವರ ಸಾಹಿತ್ಯಿಕ ಗೈಮೆಯನ್ನು ಅರೆಕೊರೆಯಾಗಿ ರೂಪಿಸಿದಂತಾಗಿದೆ. ಆದರೂ ಈ ಸಂಪ್ರಬಂಧದ ಮಟ್ಟಿಗೆ ಅಂತದೊಂದು ಕಾಲಾವಧಿಯ ಗಡುವು ಅನಿವಾರ್ಯವಿದ್ದಿತು. ಯಾವುದೊಂದು ಕೃತಿ ಇಲ್ಲವೇ ಲೇಖನ (ಸಮಕಾಲೀನವಾದದ್ದು) ಈ ಗ್ರಂಥದಲ್ಲಿ ಕಂಡು ಬಂದಿಲ್ಲ ಎಂದು ಕಂಡುಬಂದರೆ ಅದು ೧೯೦೦ರ ಅನಂತರದ್ದೆಂದು ತಿಳಿಯಬೇಕಾಗಿದೆ.*

---

* ಡಾ ಹಾವನೂರರು–ಹೊಸಗನ್ನಡದ ಅರುಣೋದಯ–ಲೇಖಕನ ನಿವೇದನೆ, ಪೂರ್ವೋಕ್ತ ಪುಟ–XVII

೧೮೧೦ರಿಂದ ೧೮೯೯ರ ನಡುವಿನ ಸುಮಾರು ೭೫೦ ವ್ಯಕ್ತಿಗಳ ಹಾಗೂ ೮೦೦ಕ್ಕೂ ಹೆಚ್ಚು ಕೃತಿಗಳ ಪರಿಚಯವನ್ನು ಒಳಗೊಂಡ ಈ ಬೃಹತ್ ಕೃತಿಯು ಆರಂಭದಲ್ಲಿ ಅರುಣೋದಯದ ಹಿನ್ನೆಲೆಯನ್ನು ವಿವೇಚಿಸುತ್ತದೆ. ಎಂಟನೆಯ ಶತಮಾನದ ರಾಜಕೀಯ ಹಿನ್ನೆಲೆಯು ಉತ್ತೇಜನಕಾರಿಯಲ್ಲದೇ ಇರುವುದರಿಂದ ಸತ್ವಪೂರ್ಣವಾದ ಕೃತಿಗಳು ರಚನೆಯಾಗದಿದ್ದರೂ ಅತ್ಯಂತ ಬರಡು ಅಥವಾ ನಿಸ್ಸತ್ವವೆನ್ನುವಂತೆ ಆಗಿರಲಿಲ್ಲ. ಅಲ್ಲದೆ ಷಟ್ಪದಿ ಸಾಂಗತ್ಯದಂತಹ ಹೊಸತನಗಳು, ಚಾರಿತ್ರಿಕ ಕಾವ್ಯಗಳು, ಉಕ್ತಿ ವಿಲಾಸಗಳ ವೈಭವ, ವಿಜಯದಾಸ, ಗೋಪಾಲದಾಸ, ಜಗನ್ನಾಥದಾಸರಂತಹ ದಾಸವರೇಣ್ಯರ ದಾಸ ಸಾಹಿತ್ಯ, ಗದ್ಯದ ಪ್ರಾದುರ್ಭಾವ, ಕಾಗದದ ಬಳಕೆ ಇವೆಲ್ಲವೂ ಕೂಡ ಮುಂದಿನ ಬೆಳವಣಿಗೆಗೆ ಇಂಬು ನೀಡಿದ್ದವು. ಈ ರೀತಿಯಾಗಿ ಹರಿದು ಬಂದ ಕನ್ನಡ ಸಾಹಿತ್ಯ ವಾಹಿನಿಗೆ ಪಾಶ್ಚಾತ್ಯ ಸಂಪರ್ಕದ ಹೊಸನೀರು ಸೇರಿ ಹೊಸಬೆಳಕಿಗೆ ಮಾರ್ಗ ತೆರೆದುಕೊಂಡಿತು ಎಂಬ ಅಂಶವನ್ನು ಹಾವನೂರರು ಸಾಧಾರವಾಗಿ ತೋರಿಸಿಕೊಟ್ಟಿದ್ದಾರೆ.

ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕದಿಂದಾಗಿ ಆದ ಆಡಳಿತ ವ್ಯವಹಾರ, ಮುದ್ರಣ ಯಂತ್ರ, ಕ್ರೈಸ್ತ ಮತ ಪ್ರಚಾರ, ಹೊಸ ಶಿಕ್ಷಣ ಪದ್ಧತಿ ಮತ್ತು ಹೊಸ ವಿಚಾರ ಸರಣಿಯು ಅರುಣೋದಯದ ಸಾಹಿತ್ಯಕ್ಕೆ ಹೇಗೆ ಪ್ರೇರೇಪಣೆಯನ್ನು ನೀಡಿತು ಎಂಬುದರ ಸಮಗ್ರ ಚಿತ್ರಣವನ್ನು ಈ ಕೃತಿ ನೀಡುತ್ತದೆ.

ಭಾರತದ ಸಾಂಸ್ಕೃತಿಕ ಪುನರುಜ್ಜೀವನಕ್ಕೆ ಒದಗಿ ಬಂದ ಅಮೂಲ್ಯ ಸಾಮಗ್ರಿಗಳು ಬೆಳೆದು ಬಂದು ಪರಿಯನ್ನು ಆರಂಭದಿಂದ ಅಂದರೆ ಕ್ರಿ.ಶ ೧೫೫೭ರಲ್ಲಿ ಪೋರ್ಚುಗೀಸ್ ಪಾದ್ರಿ ಸಂತ ಝೇವಿಯರನ ಡೌಟ್ರೀನ ಕ್ರಿಸ್ತ ಕೃತಿ ಮುದ್ರಿತವಾದಂದಿನಿಂದಲೇ ದಾಖಲಿಸುತ್ತಾ ಹೋಗಿದ್ದಾರೆ. ವಿದೇಶೀಯರು ದೇಶೀಯ ಭಾಷೆಯನ್ನು ಕಲಿತು ದೇಶೀಯ ಭಾಷೆಯ ಲಿಪಿಯನ್ನು ತಯಾರಿಸಿದ್ದು ಸಾಹಿತ್ಯದ ಬೆಳವಣಿಗೆಗೆ ಪೂರಕವಾದುದನ್ನು ಗುರುತಿಸುತ್ತಾರೆ. ಭಾರತದಲ್ಲಿ ಕಲ್ಕತ್ತ, ಮದ್ರಾಸ್, ಮುಂಬೈ ಮೊದಲಾದ ದೂರದ ಊರುಗಳಿಂದ ಹಿಡಿದು ಸೂಲಿವಿ, ಚಿಕ್ಕಬಳ್ಳಾಪುರ ಸವಣೂರುಗಳಂತಹ ಚಿಕ್ಕಪುಟ್ಟ ಊರುಗಳ ವರೆಗೆ ಹತ್ತಾರು ಸ್ಥಳಗಳಲ್ಲಿದ್ದ ೮೦ಕ್ಕೂ ಹೆಚ್ಚು ಮುದ್ರಣಾಲಯಗಳನ್ನು ಅವುಗಳ ಕಾರ್ಯಚಟುವಟಿಕೆಯನ್ನು ಗುರುತಿಸಿದ್ದು ಸೋಜಿಗವೇ ಸರಿ. ಕರ್ನಾಟಕದ ಮುದ್ರಣಕಾರ್ಯವು ಬಳ್ಳಾರಿ, ಬೆಂಗಳೂರು ಮತ್ತು ಮಂಗಳೂರಿನಲ್ಲಿ ನಡೆದುಬಂದುದನ್ನು ವ್ಯವಸ್ಥಿತವಾಗಿ ದಾಖಲಿಸಿದ್ದಾರೆ.

ಡಾ। ಹಾವನೂರರು ಹೊಸಗನ್ನಡ ಅರುಣೋದಯದಲ್ಲಿ ಕ್ರೈಸ್ತ ಮಿಶನರಿಗಳ ಸಿದ್ಧಿ ಸಾಧನೆಗಳ ಕುರಿತಾದ ಮರು ಮೌಲ್ಯಮಾಪನ ಮಾಡಿದ್ದು ಅದು ಅವರಿಗೆ ಪ್ರಿಯವಾದ ಕೆಲಸವೂ ಆಗಿತ್ತು. ಮಿಶನರಿಗಳು ಭಾರತಕ್ಕೆ ಆಗಮಿಸಿದ ಮೂಲ ಉದ್ದೇಶ ಧರ್ಮ ಪ್ರಸಾರವೇ ಆಗಿದ್ದರೂ ಅದಕ್ಕಾಗಿ ತಮ್ಮ ಕಾರ್ಯಕ್ಷೇತ್ರದ ನೆಲದ ಭಾಷೆ, ಸಾಹಿತ್ಯ, ಸಂಸ್ಕೃತಿಗಳನ್ನು ಚೆನ್ನಾಗಿ ಅರಿತುಕೊಂಡು ರಚಿಸಿದ ಸಾಹಿತ್ಯ ನಾಡಿಗೆ ವರದಾನವಾಗಿದೆ. ಎಷ್ಟೋ ಸಲ ಯಾವುದೋ ವಿಷಯದಲ್ಲಿ ಸಂಪೂರ್ಣವಾಗಿ ತಲ್ಲೀನರಾಗಿ ಕೃತಿ ರಚನೆಗೆ ತೊಡಗಿದಾಗ ಅದರಲ್ಲಿ ಮತೀಯದೃಷ್ಟಿ ಹಿಂದುಳಿದು ಆ ಕೃತಿಯು ಸರ್ವಜನಗ್ರಾಹ್ಯವಾದುದನ್ನು ನಮೂದಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಕ್ಯಾಥಲಿಕ್ ಮಿಶನರಿಯವರು, ಲಂಡನ್ ಮಿಶನ್

ಸಂಸ್ಥೆಯವರು ವೆಸ್ಲೆಯನ್ ಮೆಥಾಡಿಸ್ಟರು, ಬಾಸೆಲ್ ಮಿಶನ್‌ರವರ ಕೊಡುಗೆಗಳನ್ನು ಸಮಗ್ರವಾಗಿ ದಾಖಲಿಸಿದ್ದು ಮಹಾಸಾಧನೆಯೇ ಸರಿ. ಇದು ಲಂಡನ್, ಬಾಸೆಲ್‌ನಂತಹ ಹೊರದೇಶದ ಪತ್ರಾಗಾರದೊಂದಿಗೆ ನಿಕಟ ಸಂಪರ್ಕ ವನ್ನು ಸಾಧಿಸಿದ್ದರಿಂದ ಸಾಧ್ಯವಾಗಿತ್ತು. ಕ್ರೈಸ್ತ ಮಿಶನರಿಗಳು ಆರಂಭಿಸಿದ ಶಿಕ್ಷಣ ಸಂಸ್ಥೆಗಳು ಅದಕ್ಕಾಗಿ ರಚನೆಗೊಂಡ ಪಠ್ಯಪುಸ್ತಕಗಳು, ನಿಘಂಟು, ವ್ಯಾಕರಣಗಳು, ಕನ್ನಡಕ್ಕೆ ವರದಾನವಾದುದನ್ನು ದಾಖಲಿಸಿದ್ದಾರೆ.

ಕನ್ನಡ ಪತ್ರಿಕೋದ್ಯಮಕ್ಕೆ ೧೫೦ ವರ್ಷಗಳ ಸುದೀರ್ಘ ಇತಿಹಾಸವಿದ್ದರೂ ಅದನ್ನು ಪೂರ್ಣ ಪ್ರಮಾಣದಲ್ಲಿ ದಾಖಲಿಸುವ ಕೆಲಸ ಆಗಿರಲಿಲ್ಲ. ಇದರ ಅಧ್ಯಯನಕ್ಕೆ ಬೇಕಾದ ಮೂಲ ಆಕರ ಸಾಮಗ್ರಿಯ ಕೊರತೆಯೇ ಇದಕ್ಕೆ ಕಾರಣವಾಗಿತ್ತು. ಡಾ। ಹಾವನೂರರು ಈ ಕೊರತೆಯನ್ನು ತುಂಬಿಸಿಕೊಟ್ಟಿದ್ದಾರೆ. ಅಲ್ಲದೆ ಈ ತನಕ ನಂಬಿಕೊಂಡು ಬಂದಿದ್ದ ತಪ್ಪು ಅಭಿಪ್ರಾಯವನ್ನು ದೂರೀಕರಿಸಿ 'ಮಂಗಳೂರು ಸಮಾಚಾರ' ಪತ್ರಿಕೆಯು ಕನ್ನಡದ ಪ್ರಥಮ ಪತ್ರಿಕೆ ಎಂದು ಆಧಾರ ಸಹಿತ ಸಾಧಿಸಿದ್ದಾರೆ.

೧೮೪೯ರಲ್ಲಿ ಅಧಿಕಾರಕ್ಕೆ ಬಂದ ಮುಮ್ಮಡಿ ಕೃಷ್ಣದೇವರಾಜರ ಕೃತಿಗಳನ್ನು ಒಂದೆಡೆ ಕಲೆಹಾಕಿ ವಿಷಯವಾರು ಕೃತಿ ಸಮೀಕ್ಷೆ ಮಾಡಿದ್ದು ಆ ಕಾಲದ ಸಾಹಿತ್ಯದ ನೆಲೆ ಬೆಲೆಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಪೂರಕವಾಗಿರುತ್ತದೆ.

ಅರುಣೋದಯದ ಕಾಲದ ಸಿದ್ಧಿ ಸಾಧನೆಗಳು ಧಾರ್ಮಿಕ ಸಾಹಿತ್ಯ, ಯಕ್ಷಗಾನ ಕವಿಗಳು, ಅನುವಾದ ಸಾಹಿತ್ಯ, ಶಬ್ದಕೋಶ, ವ್ಯಾಕರಣ, ಕಾವ್ಯರಚನಾ ಪ್ರಯೋಗ, ಕಥಾ ಸಾಹಿತ್ಯ, ನಾಟಕ ಮುಂತಾದ ಎಲ್ಲಾ ಸಾಹಿತ್ಯ ಚಟುವಟಿಕೆಗಳನ್ನು ವಿವಿಧ ಅಧ್ಯಾಯಗಳಲ್ಲಿ ಚರ್ಚಿಸಿ ಆಯಾ ವಿಭಾಗಗಳಲ್ಲಿ ಪ್ರಾತಿನಿಧಿಕ ಎನ್ನಬಹುದಾದ ಕೃತಿಗಳ ನಿದರ್ಶನವನ್ನು ನೀಡಿದ್ದು ಮುಂದಿನ ಅಧ್ಯಯನಕಾರರಿಗೆ ಉಪಯುಕ್ತವಾಗಿದೆ.

ಈ ರೀತಿಯಾಗಿ ೧೯ನೇ ಶತಮಾನದ ಸಾಹಿತ್ಯ ಚರಿತ್ರೆಯನ್ನು ಮತ್ತೆ ಸಮಗ್ರವಾಗಿ ಕಟ್ಟಿ ಕೊಡುವಲ್ಲಿ ಹಾವನೂರರ ಹಲವು ವರ್ಷಗಳ ತಾಳ್ಮೆ ಮತ್ತು ಪರಿಶ್ರಮವಿದೆ. ಇದು ಕೇವಲ ಸ್ಥಳೀಯ ಮಾಹಿತಿಗಳಿಂದ, ಆಕರಗಳಿಂದ ರೂಪುಗೊಂಡದ್ದಲ್ಲ, ದೂರದ ಕಲ್ಕತ್ತ, ಮದ್ರಾಸ್, ಮುಂಬೈ, ಸಾಂಗ್ಲಿ, ಮುಂತಾದ ಊರುಗಳ ಗ್ರಂಥಾಲಯದಿಂದ ಅಲ್ಲದೆ ಲಂಡನ್, ಬಾಸೆಲ್, ಆಕ್ಸ್‌ಫರ್ಡ್, ಎಡಿನ್‌ಬರೋ ಮುಂತಾದ ವಿದೇಶಿ ಗ್ರಂಥ ಭಂಡಾರ ಗಳಿಂದ ಮಾಹಿತಿಯನ್ನು ಬಳಸಿಕೊಂಡಿದ್ದಾರೆ. ಆದ್ದರಿಂದ ಇಲ್ಲಿರುವ ವಿಷಯಗಳಿಗೆ ಒಂದು ಖಚಿತತೆ, ಅಧಿಕೃತತೆ ಇದೆ. ಮತ್ತು ಮುಂದಿನ ಅಧ್ಯಯನಕ್ಕೆ ಇದೊಂದು ಆಕರ ಗ್ರಂಥವೂ ಹೌದು. 'ಹೊಸಗನ್ನಡದ ಅರುಣೋದಯ' ಒಂದು ಅಪರೂಪದ ಆಕರ ಗ್ರಂಥ, ಶ್ರೇಷ್ಠವಾದ ಸಂಶೋಧನ ಗ್ರಂಥ, ನಮ್ಮ ಸಾಹಿತ್ಯ ಚರಿತ್ರೆಯ ಮುಂದಿನ ಸಂಶೋಧಕರು ಇದಕ್ಕೆ ಹೊಸ ವಿಷಯಗಳನ್ನು ಸೇರಿಸಬಹುದು. ಇದರ ಕೊರತೆಯನ್ನೂ ಹೇಳಬಹುದು. ಆದರೆ ಇದನ್ನು ಅಭ್ಯಸಿಸದೆ, ಆಧಾರವಾಗಿಟ್ಟುಕೊಳ್ಳದೆ ೧೯ನೇ ಶತಮಾನಕ್ಕೆ ಸಂಬಂಧಿಸಿದ ಕೆಲಸ ಮಾಡುವುದು ಮಾತ್ರ ಖಂಡಿತ ಸಾಧ್ಯವಿಲ್ಲ"*.

---

* ಡಾ ಹಾವನೂರರು–ಹೊಸಗನ್ನಡದ ಅರುಣೋದಯ–ಮುನ್ನುಡಿ–ಪೂರ್ವೋಕ್ತ ಪುಟXII

## ಫಲಶೃತಿ

ಕನ್ನಡ ನಾಡು ಕಂಡ ಅತ್ಯಂತ ಶ್ರೇಷ್ಠ ವಿದ್ವಾಂಸರಲ್ಲಿ ಒಬ್ಬರಾದ ಡಾ। ಶ್ರೀನಿವಾಸ ಹಾವನೂರರು ವಿಶೇಷವಾಗಿ ಗುರುತಿಸಿಕೊಂಡದ್ದು ಸಂಶೋಧಕರಾಗಿ ಪ್ರಸ್ತುತ 'ಕನ್ನಡ ಸಂಶೋಧನೆಗೆ ಡಾ। ಹಾವನೂರರ ಕೊಡುಗೆ' ಎಂಬ ಸಂಪ್ರಬಂಧದಲ್ಲಿ ಕಂಡು ಕೊಂಡ ಮುಖ್ಯಾಂಶಗಳು.

ಡಾ। ಶ್ರೀನಿವಾಸ ಹಾವನೂರರು ಒಂದು ಬಡ ಕುಟುಂಬದಲ್ಲಿ ಹುಟ್ಟಿದರೂ ಜೀವನದಲ್ಲಿ ಉನ್ನತವನ್ನು ಸಾಧಿಸುವ ಹಂಬಲದಿಂದ ಸ್ವಯಂ ಸಾಧಕರಾಗಿ ಬೆಳೆದವರು. ವಾರಾನ್ನದಿಂದ ಶಾಲಾ ಶಿಕ್ಷಣವನ್ನು ಪಡೆದು ಗಳಿಕೆಯೊಂದಿಗೆ, ಕಲಿಕೆ ಮುಂದುವರಿಸಿ ಕಾಲೇಜು ಶಿಕ್ಷಣವನ್ನು ಪಡೆದರು. ಮುಂದೆ ಬಹುಮುಖಿ ಉದ್ಯೋಗವನ್ನು ಆಯ್ದುಕೊಂಡು ಅಪಾರವಾದ ಜೀವನಾನುಭವವನ್ನು ಪಡೆದುಕೊಂಡರು. ಅದರಲ್ಲೂ ಬಹುಭಾಷಾ, ಬಹುಸಂಸ್ಕೃತಿಯ ತಾಣವಾದ ಮುಂಬೈಯಲ್ಲಿ ನೆಲೆಯೂರಿದ್ದು, ಟಿ.ಐ.ಎಫ್.ಆರ್.ನಲ್ಲಿ ಗ್ರಂಥಪಾಲಕರಾಗಿ ನಿಯುಕ್ತರಾದದ್ದು ಹಾವನೂರರ ಬದುಕಿಗೆ ಹೊಸ ದಿಕ್ಸೂಚಿಯಾಯಿತು. ಮಂಗಳೂರು ಮತ್ತು ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ತಮ್ಮ ಬದುಕಿನ ಉದ್ಯೋಗಗಳೆಂಬ ಸ್ವರ್ಣಮಯ ಹಾದಿಗೆ ಮಂಗಳ ಗೀತೆ ಹಾಡಿದರು. ಈ ನಡುವೆ ಹತ್ತೊಂಬನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆಯ ಕುರಿತು ಸಂಶೋಧನೆ ನಡೆಸಿ 'ಹೊಸಗನ್ನಡದ 'ಅರುಣೋದಯ'ವೆಂಬ ಮೌಲಿಕ ನಿಬಂಧವೊಂದನ್ನು ಸಾರಸ್ವತ ಲೋಕಕ್ಕೆ ಸಾದರಪಡಿಸಿದ್ದು, ಸಂಶೋಧನ ವಲಯದಲ್ಲಿ ಹಾವನೂರರ ಗಟ್ಟಿತನಕ್ಕೆ ನಿದರ್ಶನವಾಯಿತು. ಜತೆಗೆ ಸೃಜನಶೀಲ ಸಾಹಿತ್ಯದಲ್ಲೂ ತನ್ನ ಛಾಪನ್ನು ಮೂಡಿಸುವಲ್ಲಿ ಸಫಲರಾದರು.

ಸಂಶೋಧನೆ ಎಂದರೆ ಹೊಸದನ್ನು ಕಂಡು ಹಿಡಿಯುವುದು, ಹುಡುಕುವುದಲ್ಲ ಎಂಬ ಸಿದ್ಧಾಂತದೊಂದಿಗೆ ಆಖಾಡಕ್ಕಿಳಿದ ಹಾವನೂರರು ಈ ವಲಯದಲ್ಲಿ 'ಹಾವನೂರುತನ'ವನ್ನು ಮೂಡಿಸಿದರು. ವಿಷಯದ ಬಗ್ಗೆ ಏನೂ ಗೊತ್ತಿಲ್ಲದಿದ್ದಾಗ ; ಮಸು ಮಸುಕಾಗಿ ಗೊತ್ತಿದ್ದಾಗ, ಸ್ವಲ್ಪ ಮಾತ್ರ ಗೊತ್ತಿದ್ದಾಗ, ತಪ್ಪಾಗಿ ತಿಳಿದಿದ್ದಾಗ ಸತ್ಯವನ್ನು ಕಂಡುಹಿಡಿಯ

ಬೇಕು ಎಂಬುದು ಹಾವನೂರರ ತತ್ವ

ಸಾಹಿತ್ಯವನ್ನು ಸೃಜನ, ವಿಮರ್ಶನ ಮತ್ತು ಸಂಶೋಧನವೆಂದು ವಿಭಾಗಿಸಿದರೆ ಸೃಜನ ಕರ್ತೃ ಪ್ರಧಾನ, ಸಂಶೋಧನ ವಸ್ತು ಪ್ರಧಾನ, ವಿಮರ್ಶನ ಉಭಯ ಪ್ರಧಾನವಾಗಿದ್ದು, ಕೃತಿಯನ್ನು ವಿಮರ್ಶೆ ಮತ್ತು ಸಂಶೋಧನೆ ಎಂಬ ಎರಡು ಮಗ್ಗಲಿನಿಂದ ಅಧ್ಯಯನ ನಡೆಸಬಹುದಾಗಿದೆ. ಅಲ್ಲದೆ ಅವು ಒಂದಕ್ಕೊಂದು ಪೂರಕವಾಗಿದ್ದು, ಯಾವುದೂ ಮೊದಲು ಬರಬಹುದೆಂದು ಅಭಿಪ್ರಾಯವನ್ನು ಹಾವನೂರರು ವ್ಯಕ್ತಪಡಿಸಿದ್ದಾರೆ.

ಹಾವನೂರರ ಪ್ರಕಾರ ಇತರ ವಿಷಯುಗಳಿಗೆ ಹೋಲಿಸಿದಾಗ ಸಾಹಿತ್ಯ ಸಂಶೋಧನೆಯು ಹೆಚ್ಚು ವ್ಯಾಪಕವಾಗಿರುತ್ತದೆ. ಇಲ್ಲಿ ಒಂದು ಸತ್ಯವನ್ನು ಕಂಡುಕೊಳ್ಳುವುದು ಸುಲಭವಲ್ಲ. ಇದು ಸಮಗ್ರ ಜೀವನವನ್ನು ಪ್ರತಿಬಿಂಬಿಸುತ್ತಿದ್ದು, ಅಂತರ್‌ಶಿಸ್ತೀಯ ಸಾಹಚರ್ಯವೂ ಬೇಕಾಗುತ್ತದೆ. ಸಾಹಿತ್ಯ ಸಂಶೋಧನೆಯನ್ನು ಚಾರಿತ್ರಿಕ ದೃಷ್ಟಿ, ಕಾಲ್ಪನಿಕ ದೃಷ್ಟಿ, ಪುನರ್ ಮೌಲ್ಯಮಾಪನ, ಸಂಖ್ಯಾನ್ವಯ ದೃಷ್ಟಿ, ಶಬ್ದಮೂಲದ ಶೋಧ ಮುಂತಾದ ದೃಷ್ಟಿಕೋನಗಳಿಂದ ನಡೆಸಬಹುದಾಗಿದೆ ಎಂಬ ಸಲಹೆಯನ್ನು ಹಾವನೂರರು ನೀಡಿದ್ದಾರೆ.

ಡಾ। ಹಾವನೂರರು ತಮ್ಮ ಸಂಶೋಧನೆಯುದ್ದಕ್ಕೂ ಕೈಗಡದ ಅನುಷಂಗಿಕ ಆಕರಗಳನ್ನು ಎಂದೂ ನೆಚ್ಚಿಕೊಂಡಿರಲಿಲ್ಲ. ತಾವು ಆಯ್ದುಕೊಂಡ ೧೯ನೇ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆಯ ಸಂಶೋಧನೆ ಅತ್ಯಂತ ಕಷ್ಟಕರವಾಗಿದ್ದು, ಅದರ ಆಕರ ಸಾಮಾಗ್ರಿಯನ್ನು ಹುಡುಕುವುದು ಅತ್ಯಂತ ಕಠಿಣವಾಗಿತ್ತು. ಆದರೆ ಅದನ್ನು ಶೋಧಿಸುತ್ತಾ ನಾಡಿನಾದ್ಯಂತ ಸಂಚರಿಸಿದರು. ವಿದೇಶಕ್ಕೂ ಹೋದರು. ಪತ್ತಾರು ಜನರ ಸ್ನೇಹವನ್ನು ಸಂಪಾದಿಸಿ ಅವರೊಂದಿಗೆ ಚರ್ಚಿಸಿದರು. ಪತ್ರ ಸಂಪರ್ಕವನ್ನು ಬೆಳೆಸಿದರು. ರಾಶಿ ರಾಶಿ ಸಾಮಾಗ್ರಿಯನ್ನು ಸಂಗ್ರಹಿಸಿದರು ಈ ಮೂಲಕ ಹೊಸ ಸಂಶೋಧಕರಿಗೆ ಮಾದರಿಯಾದರು.

ಏಕಕಾಲಕ್ಕೆ ಎರಡು–ಮೂರು ವಿಷಯಗಳನ್ನು ಹಿಡಿದು ಸಂಶೋಧನೆ ಮಾಡುತ್ತಿದ್ದ ಹಾವನೂರರು ಅದನ್ನು ಅತ್ಯಂತ ಕ್ರಮಬದ್ಧತೆಯಿಂದ ಮುಗಿಸುತ್ತಿದ್ದುದು ಅವರ ಸಾಮರ್ಥ್ಯ. ಅಲ್ಲದೆ ಅದರಲ್ಲಿ ಹೆಚ್ಚು ಅಗತ್ಯದ್ದು ಆ ಕ್ಷಣಕ್ಕೆ ಯಾವುದೆಂದು ಗುರುತಿಸುವ ಕಲೆ ಅವರಿಗೆ ಸಿದ್ಧಿಸಿತ್ತು.

ಯಾವುದೇ ಮಾಹಿತಿ, ಆಕರಗಳು ದೊರಕಿದಾಗ ಅದನ್ನು ವ್ಯವಸ್ಥಿತವಾಗಿ ಸಂಗ್ರಹಿಸಿ ಬೇಕಾದಾಗ ಉಪಯೋಗಿಸುವ ಅಥವಾ ಬೇಕಾದವರಿಗೆ ಕೊಡುವ ಹಾವನೂರರು ನಿಜವಾಗಿಯೂ ಪುಸ್ತಕ ಪ್ರಪಂಚದ ಪಳೆಯುಳಿಕೆಯ ಪ್ರೇಮಿ. ಯಾವುದೇ ಕೆಲಸಕ್ಕೆ ತೊಡಗುವ ಮುನ್ನ ಅವರು ಮಾಡಿಕೊಳ್ಳುತ್ತಿದ್ದ ವೈಜ್ಞಾನಿಕವಾದ ಪೂರ್ವಸಿದ್ಧತೆ ಅನುಕರಣೀಯ ವಾಗಿದ್ದಿತು.

ಸಾಹಿತ್ಯ ಸಂಶೋಧನೆಯ ಜೊತೆಗೆ ಇತಿಹಾಸ ಸಂಶೋಧನೆಯ ಕಡೆಗೂ ಅಪಾರವಾದ ಒಲವನ್ನು ಹೊಂದಿದ್ದ ಹಾವನೂರರು ಇತಿಹಾಸ ಅಧ್ಯಯನಕಾರರು ಶಾಸನದ ಜೊತೆಗೆ ಸಾಹಿತ್ಯವನ್ನು ಆಕರವಾಗಿ ಬಳಸಿಕೊಳ್ಳಬೇಕಾದ ಅಗತ್ಯತೆ ಮತ್ತು ಅನಿವಾರ್ಯತೆಯನ್ನು ಸೋದಾಹರಣವಾಗಿ ವಿವರಿಸಿದ್ದು ಮುಂದಿನ ಸಂಶೋಧಕರಿಗೆ ದಾರಿದೀಪವಾಗಲಿದೆ.

ಇತಿಹಾಸದ ಸಂಶೋಧನೆ ಪೂರ್ಣವಾಗಬೇಕಾದರೆ ನಮಗೆ ತಿಳಿಯದ ವಿದೇಶಿ ಭಾಷೆಗಳನ್ನು ಮತ್ತು ಮೃತ ಲಿಪಿಯನ್ನು ಕಲಿಯಬೇಕಾಗಿದೆ ಎಂದು ಹೇಳುವ ಹಾವನೂರರು ಹಾಗೆ ಆ ಭಾಷೆಯನ್ನು ಕಲಿಯುವ ಆಸಕ್ತಿವುಳ್ಳವರಿಗೆ ಅನುದಾನವನ್ನು ನೀಡಬೇಕೆಂದು ಇತಿಹಾಸದ ಅಕಾಡಮಿಯವರಿಗೆ ಕೇಳಿಕೊಂಡಿದ್ದಾರೆ. ಅದು ಅವರಿಗೆ ಸಂಶೋಧನೆಯ ಕುರಿತು ಇರುವ ಕಾಳಜಿಯನ್ನು ಸೂಚಿಸುತ್ತದೆ. ಇತಿಹಾಸದ ಸಂಶೋಧನೆಯಲ್ಲಿ ಅವೆಷ್ಟೋ ವಿಷಯಗಳು ಉಳಿದುಕೊಂಡಿದ್ದು, ಅದರ ಕಡೆಗೆ ಲಕ್ಷ್ಯ ಕೊಡುವ ಅಗತ್ಯತೆಯನ್ನು ಕಂಡುಕೊಂಡಿದ್ದಾರೆ. ಅಲ್ಲದೆ ಸಂಶೋಧನೆಯು ಪರಂಪಾರಗತ ಕ್ರಮವನ್ನು ಬಿಟ್ಟು ಕೊಟ್ಟು ಹೊಸತನದತ್ತ ತೆರೆದುಕೊಳ್ಳಬೇಕು ಎಂಬ ಆಶಯವನ್ನು ಹಾವನೂರರು ವ್ಯಕ್ತಪಡಿಸಿದ್ದಾರೆ. ಅಲ್ಲದೆ ಇತಿಹಾಸ ಸಂಶೋಧನೆಯು ಕೇವಲ ಗತ ವಿಷಯದಲ್ಲೇ ಉಳಿಯಬಾರದು ಅದರ ಆಧಾರದಲ್ಲಿ ಮುಂದೇನಾಗಬಹುದೆಂಬ ಅಧ್ಯಯನವನ್ನೂ ಮಾಡಬೇಕು ಮತ್ತು ಪರಿಹಾರವನ್ನು ಕಂಡುಕೊಳ್ಳಬೇಕು. ಇದರಿಂದ ಸಂಶೋಧನೆಯು ಇನ್ನಷ್ಟು ಫಲಪ್ರದವಾಗುತ್ತದೆ ಎಂದು ತಿಳಿಸಿದ್ದಾರೆ. ಸದಾ ಹೊಸತನಕ್ಕಾಗಿ ಹಂಬಲಿಸುವ ಹಾವನೂರರು ಇದುವರೆಗೆ ಯಾರೂ ಕಾಣದ ಕೆಲವೊಂದು ಸತ್ಯವನ್ನು ಕಂಡುಕೊಂಡಿದ್ದಾರೆ.

ಕರ್ನಾಟಕದ ಇತಿಹಾಸದಲ್ಲಿ ಕಿತ್ತೂರಿನ ಹಿರಿಯ ರಾಣಿ ಚೆನ್ನಮ್ಮನ ಕಥೆ ಮನೆಮಾತಾಗಿದೆ. ಆದರೆ ಕಿರಿಯ ರಾಣಿ ವೀರಮ್ಮನ ಇತಿಹಾಸ ಕತ್ತಲಲ್ಲಿಯೇ ಉಳಿದಿತ್ತು. ಹಾವನೂರರು ಈ ಕುರಿತಾದ ದಾಖಲೆಗಳನ್ನು ಪರಿಶೀಲಿಸಿ ಕಿತ್ತೂರಿನ ಶಿವಲಿಂಗ ರುದ್ರನ ಪತ್ನಿಯಾದ ಈ ಕಿರಿಯ ರಾಣಿ ವೀರಮ್ಮ, ಹದಿಹರೆಯದ ವಿಧವೆಯದರೂ ಎದೆಗುಂದದೇ ತೋರಿದ ಧೈರ್ಯವನ್ನು, ಸೆರೆಮನೆಯಲ್ಲಿ ಕಾಯಿಲೆ ಬಿದ್ದು ನಿಧನ ಹೊಂದಿದ ಕತೆಯನ್ನು ಕಂಡುಕೊಂಡಿದ್ದಾರೆ.

ಸುರಪುರದ, ದೊರೆಯಾದ ವೆಂಕಟಪ್ಪನಾಯಕನ ಸಾವಿನ ಘಟನೆಯ ಸತ್ಯವನ್ನು ಕಂಡುಕೊಳ್ಳುವಲ್ಲಿ ಹಾವನೂರರು ಯಶಸ್ವಿಯಾಗಿದ್ದಾರೆ.

ಕಾಟನ್ ಲಾಬಿಯೇ ಕಾರಣವಾಗಿ ಉತ್ತರ ಕನ್ನಡ ಜಿಲ್ಲೆ ನಿರ್ಮಾಣವಾದುದರ ಹಿನ್ನೆಲೆಯನ್ನು ಹುಟ್ಟುತ್ತಲೇ ತಬ್ಬಲಿಯಾದ ಕಾರಣವನ್ನು ಕಂಡುಕೊಂಡಿದ್ದಾರೆ.

ಉಡುಪಿಯ ರಥಬೀದಿಯಲ್ಲಿರುವ ಕನಕಗೋಪುರ ೧೬ನೆಯ ಶತಮಾನದ್ದೇ ಅಥವಾ ೧೯೧೮ ಕಾಲದ್ದೇ ಎಂಬ ವಿಷಯದ ಕುರಿತಾದ ವಾದ ಪ್ರತಿವಾದಗಳು ನಡೆದಾಗ ಹಾವನೂರರು ದಿನಾಂಕ: ೧೯ ಜೂನ್ ೧೮೯೪ರಂದು ಉಡುಪಿಯ ಡಿಸ್ಟ್ರಿಕ್ ಮುನ್ಸೀಫರ ರಥಬೀದಿಗೆ ಸಂಬಂಧಿಸಿದ ಒಂದು ತೀರ್ಪಿನ ಆಧಾರದಿಂದ ಆ ಗೋಪುರ ೧೮೯೪ರಲ್ಲಿ ಇರಲಿಲ್ಲ ಮತ್ತು ೧೯೧೦ರಲ್ಲಿ ನಿರ್ಮಾಣಗೊಂಡಿತು ಎಂದು ಸಾಧಿಸಿದ್ದಾರೆ.

ಮುಂಬಯಿ ಸಂಗ್ರಹಾಲಯದಲ್ಲಿರುವ ದಾಖಲೆಗಳ ಆಧಾರದಿಂದ ಸಂಗೊಳ್ಳಿ ರಾಯಣ್ಣನ ಸ್ವಾತಂತ್ರ್ಯದ ಹೋರಾಟದ ಇತಿಹಾಸವನ್ನು ದಾಖಲಿಸಿದ್ದಾರೆ. ಮೂಲತಃ ಶೇತ್ಸನದಿಯಾದ ಸಂಗೊಳ್ಳಿ ರಾಯಣ್ಣ ಜಮೀನು ಹಕ್ಕನ್ನು ರದ್ದುಪಡಿಸಿದ್ದರಿಂದ ಹೋರಾಟಕ್ಕಿಳಿದನೆಂದೂ, ಕಿತ್ತೂರಿನ ಸಂಸ್ಥಾನ ನಿರ್ನಾಮ ಮಾಡಿದ್ದುದರ ಸಿಟ್ಟಿನಲ್ಲಿದ್ದ ಸಾಮಾನ್ಯ ಜನತೆಯ ಬೆಂಬಲವೂ ದೊರೆಯಿತೆಂಬ ಸತ್ಯವನ್ನು ದಾಖಲಿಸಿದ್ದಾರೆ.

ಪತ್ರಿಕೋದ್ಯಮವನ್ನು ವೃತ್ತಿಯಾಗಿ ಪ್ರವೃತ್ತಿಯಾಗಿ ಸ್ವೀಕರಿಸಿದ್ದ ಹಾವನೂರರು ಪತ್ರಿಕೋದ್ಯಮದ ಇತಿಹಾಸವನ್ನು ಸ್ವಾತಂತ್ರ್ಯ ಪೂರ್ವದಿಂದ ಹಿಡಿದು ಸ್ವಾತಂತ್ರ್ಯೋತ್ತರದ ವರೆಗೆ ವಿವರಿಸಿದ್ದಾರೆ.

ಈ ಹಿನ್ನೆಲೆಯಲ್ಲಿ ಹಾವನೂರರ ಮಹತ್ವದ ಸಾಧನೆ "ಮಂಗಳೂರು ಸಮಾಚಾರ" ಕನ್ನಡದ ಪ್ರಥಮ ವರ್ತಮಾನ ಪತ್ರಿಕೆ ಎಂಬುದನ್ನು ಸಾಧಿಸಿದ್ದು, ಇದಕ್ಕೆ ಅವರಿಗೆ ಆಧಾರವಾಗಿ ದೊರೆತದ್ದು ಯುರೋಪಿನ ಪ್ರಾಚ್ಯ ಪುಸ್ತಕಾಲಯದಲ್ಲಿ ಈ ಪತ್ರಿಕೆಯ ಪ್ರತಿಗಳು. ಅದರ ಸಂಪೂರ್ಣ ಸಂಪುಟದ ಮೈಕ್ರೋಫಿಲ್ಮನ್ನು ಇಂಗ್ಲೆಂಡಿನಿಂದ ತರಿಸಿಕೊಂಡು ಅಧ್ಯಯನ ನಡೆಸಿದಾಗ ಆ ಪತ್ರಿಕೆಯು ೧೮೪೩ರಲ್ಲಿ ಆರಂಭವಾದ ವಿಷಯ ತಿಳಿದುಬಂತು. ಹರ್ಮನ್ ಮೊಗ್ಲಿಂಗ್ ಇದರ ಸಂಪಾದಕನಾಗಿದ್ದ ಎಂದು ಸಾಧಿಸಿದ್ದಾರೆ.

ಕ್ರೈಸ್ತ ಸಾಹಿತ್ಯವನ್ನು ಅತ್ಯಂತ ಕೂಲಂಕಷವಾಗಿ ಅಧ್ಯಯನ ಮಾಡಿದ ಹಾವನೂರರು ಅನೇಕ ಹೊಸ ಸತ್ಯವನ್ನು ಕಂಡುಕೊಂಡರು. ಮತ ಪ್ರಸಾರದ ಉದ್ದೇಶದಿಂದಲೇ ರಚನೆ ಮಾಡಿದ ಮಿಶನರಿಯವರ ಕೃತಿಗಳು ಎಷ್ಟೋ ಸಲ ಧರ್ಮನಿರಪೇಕ್ಷವಾಗಿ ಮೂಡಿಬಂದದ್ದನ್ನು ಉದಾಹರಿಸಿದ್ದಾರೆ ಮತ್ತು ೧೯ನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿ ಅವರ ಪಾತ್ರವನ್ನು ವಿಶದೀಕರಿಸಿದ್ದಾರೆ. ಅವರು ರಚಿಸಿದ ಅಪೂರ್ವವಾದ ಶಬ್ದಕೋಶಗಳು, ಅನುವಾದಗಳು, ಸೃಜನಶೀಲ ಸಾಹಿತ್ಯಗಳನ್ನು ಕವಿ, ಕಾಲ, ಸಹಿತ ವಿವರಿಸಿದ್ದಾರೆ. ಕನ್ನಡ ಶಬ್ದಕೋಶಕ್ಕಾಗಿ ಸದಾ ನೆನೆಯಲ್ಪಡುವ ಕಿಟೆಲರು ಹೊಸಗನ್ನಡದ ಕವಿತೆಯ ಆರಂಭಕಾರರು ಎಂಬುದನ್ನು ಹಾವನೂರರು ಮೊದಲ ಬಾರಿಗೆ ಕಂಡುಕೊಂಡಿದ್ದಾರೆ. ಕಿಟೆಲರು ೧೮೫೩ರಲ್ಲಿ ಭಾರತಕ್ಕೆ ಬಂದಾಗ ಹೊಸಗನ್ನಡ ಕವಿತೆ ಎಂಬುದು ಇರಲಿಲ್ಲ. ೧೮೪೦ರಲ್ಲಿ ಕೆಲವೊಂದು ಕ್ರೈಸ್ತಗೀತಗಳು ಅನುವಾದಕೊಂಡಿದ್ದವು. ಅದೂ ಪಾಶ್ಚಾತ್ಯ ರೀತಿಯಲ್ಲಿ ಹಾಡಬೇಕಿತ್ತು. ಹಾವನೂರರು ಕಂಡುಕೊಂಡಂತೆ ಕಿಟೆಲರಿಗೆ ಹರಿದಾಸರ ಹಾಡುಗಳು ಸ್ಫೂರ್ತಿಯಾಗಿದ್ದವು. ಧರ್ಮ ಪ್ರಸಾರಕ್ಕೆ ಇದೇ ಸೂಕ್ತ ಎಂದು ತಿಳಿದು ಕವಿತಾ ರಚನೆಗೆ ತೊಡಗಿದ್ದರು. ಆದರೆ ಅವರಿಗೆ ಸ್ವದೇಶದಿಂದ ಸರಿಯಾದ ಬೆಂಬಲ ಸಿಗದಾದಾಗ ಕೈಬಿಟ್ಟರು.

ಕಂಪ್ಯೂಟರನ್ನು ಸಂಶೋಧನೆಗೆ ಬಳಸಿಕೊಳ್ಳಬಹುದು ಇದರಿಂದ ಅತ್ಯಂತ ಕಡಿಮೆ ಅವಧಿಯಲ್ಲಿ ಅತ್ಯಂತ ನಿಖರವಾದ ಫಲಿಶಾಂಶವು ನೀಡುತ್ತದೆ ಎಂಬುದನ್ನು ಮುದ್ದಣ್ಣನ ಕೃತಿಯಲ್ಲಿ ಶಿವಭಕ್ತಿ ಸ್ಫುಟಗೊಂಡದ್ದರ ಉದಾಹರಣೆಯೊಂದಿಗೆ ಸಾಧಿಸಿದ್ದಾರೆ. ಅಲ್ಲದೆ ಕಂಪ್ಯೂಟರನ್ನು ಬೇರೆ ಯಾವ ರೀತಿಯಲ್ಲಿ ಬಳಸಬಹುದೆಂದು ಸಾಧಿಸಿದ್ದಾರೆ.

ಕಾದಂ-ಕಥನವೆಂಬ ಹೊಸ ಸಾಹಿತ್ಯ ಪ್ರಕಾರವೊಂದನ್ನು ಮೊತ್ತ ಮೊದಲಬಾರಿಗೆ ಸೃಜಸಿದವರು ಡಾ.ಹಾವನೂರರು. ಇಲ್ಲಿ ಕಾದಂಬರಿಯೊಂದರ ಯಾವುದೋ ಒಂದು ಪಾತ್ರವನ್ನು ಅಥವಾ ಸನ್ನಿವೇಶವನ್ನು ತೆಗೆದುಕೊಂಡು ಹೃದ್ಯವಾಗಿ ಕಥೆಯನ್ನು ಹೆಣೆಯಲಾಗಿರುತ್ತದೆ. ಇದರಿಂದ ಇಡೀ ಕಾದಂಬರಿಯನ್ನು ಓದಿದ ರಸಸ್ವಾದನೆಯನ್ನು ಪಡೆಯಬಹುದಾಗಿದೆ.

ಐ.ಮಾ. ಮುತ್ತಣ್ಣನವರ "ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ" ಕೃತಿಯಲ್ಲಿದ್ದ ದೋಷಗಳನ್ನು ಪತ್ತೆಹಚ್ಚಿ ವಿಮರ್ಶಾ ಲೇಖನವನ್ನು ಪ್ರಕಟಿಸಿ ಹಾದಿ ತಪ್ಪಬಹುದಾಗಿದ್ದ

ಹೊಸ ಅಧ್ಯಯನಕಾರರಿಗೆ ದಾರಿದೀಪವಾಗಿದ್ದಾರೆ.

ದಾಸ ಸಾಹಿತ್ಯದ ಸಂಪಾದನೆಯ ಹೊಣೆ ಹೊತ್ತು ಸುಮಾರು ೧೫ ಸಾವಿರ ಕೀರ್ತನೆಗಳನ್ನು ಸಂಗ್ರಹಿಸಿ ೫೦ ಸಂಪುಟಗಳಲ್ಲಿ ಹೊರತಂದು ಕಂಪ್ಯೂಟರ್‌ನ ಸಹಾಯದಿಂದ ವಿಷಯವಾರು ವಿಂಗಡಿಸಿ ವಿಮರ್ಶಿಸಿದ ಹಾವನೂರರು ಕನ್ನಡ ಸಾಹಿತ್ಯಲೋಕಕ್ಕೆ ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾರೆ.

ದಾಸ ಸಾಹಿತ್ಯದ ಕೀರ್ತನೆಗಳ ಸಹಾಯದಿಂದ ಶ್ರೀ.ಶ್ರೀಪಾದರಾಜರೇ ದಾಸಸಾಹಿತ್ಯದ ಆದ್ಯಪ್ರವರ್ತಕರು ನರಹರಿತೀರ್ಥರಲ್ಲ ಎಂಬುದನ್ನು ಕಂಡುಕೊಂಡಿದ್ದಾರೆ. ಅಲ್ಲದೆ ಮಾಧ್ವ ಪಂಥದ ಅಕ್ಷೋಭ್ಯತೀರ್ಥರಿಗೂ ಅದ್ವೈತ ಪಂಥದ ಶ್ರೀ. ವಿದ್ಯಾರಣ್ಯರಿಗೂ ವೈಷ್ಣವ ಪಂಥದ ಶ್ರೀ ವೇದಾಂತ ದೇಶಿಕರ ಮಧ್ಯಸ್ಥಿಕೆಯಲ್ಲಿ 'ತತ್ವಮಸಿ' ಎಂಬ ವೇದಾಂತ ಸೂತ್ರದ ವಿಚಾರವಾಗಿ ನಡೆಯಿತೆನ್ನಲಾದ ವಾದದ ಸತ್ಯಾಸತ್ಯತೆಯೆಡಗೆ ಬೆಳಕು ಚೆಲ್ಲಿದ್ದಾರೆ.

ಡಾ.ಹಾವನೂರರ ಹೊಸಗನ್ನಡದ ಅರುಣೋದಯ ಎಂಬ ಕೃತಿ ೧೯ನೆಯ ಶತಮಾನದ ಕನ್ನಡ ಸಾಹಿತ್ಯಚರಿತ್ರೆಯ ಸಂಶೋಧನೆಯ ಫಲಿತ. ಈ ಕೃತಿಯಲ್ಲಿ ಹೊಸಗನ್ನಡದ ಹಿಂದಿನ ಸ್ಥಿತಿಹೇಗಿತ್ತು ಮತ್ತು ಅದು ಹೊಸಗನ್ನಡದ ಬೆಳವಣಿಗೆಗೆ ಹೇಗೆ ಪ್ರೇರಣೆ ನೀಡಿತು ಎಂಬುದರ ಕುರಿತು ಸುದೀರ್ಘವಾದ ಅಧ್ಯಯನವನ್ನು ನಡೆಸಿದ್ದಾರೆ. ಮಿಶನರಿಗಳ ಧಾರ್ಮಿಕ, ಶೈಕ್ಷಣಿಕ, ಸಾಹಿತ್ಯಿಕ ಸಾಧನೆಗಳು ಆ ಕಾಲದ ದೇಶೀಯ ವಿದ್ಯಾವಂತರ, ಧಾರ್ಮಿಕ ವಾಙ್ಮಯಕಾರರ ಸಾಧನೆ ಸಿದ್ಧಿಗಳನ್ನು ಕೂಲಂಕಷವಾಗಿ ವಿವರಿಸಿದ್ದಾರೆ.

## ಪರಾಮರ್ಶನ ಗ್ರಂಥಗಳು

೧. ಹೊಸಗನ್ನಡದ ಅರುಣೋದಯ
ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು-೨೦೦೦
೨. ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ, ಹನಿಗತೆ, ಕಂಪ್ಯೂಟರ್.ಇ.
ಅನನ್ಯ ಪ್ರಕಾಶನ -೧೯೮೨
೩. ಪ್ರೇಕ್ಷಣೀಯ ಕರ್ನಾಟಕ
ಕರ್ಮವೀರ, ಬೆಂಗಳೂರು-೧೯೯೬
೪. ಕನ್ನಡ ಪತ್ರಿಕಾ ಸೂಚಿ
ಮೈಸೂರು ವಿಶ್ವವಿದ್ಯಾನಿಲಯ-೨೦೦೭
೫. ಸಂ-ಕಥನ
ಸುಮುಖ ಪ್ರಕಾಶನ-೨೦೦೮
೬. ಒಂದಷ್ಟು ಲಘು, ಒಂದಷ್ಟು ಗಂಭೀರ
ಕರ್ನಾಟಕ ಸಂಘ, ಪುತ್ತೂರು-೧೯೯೯.
೭. ಅವರು ಮತ್ತು ದೇವಕ್ಕ
ಪರ್ಣಕುಟಿ ಗ್ರಂಥಮಾಲೆ-೧೯೪೮
೮. ಗಂಧ ಮತ್ತು ಕಲ್ಲು
ಬೆಂಗಳೂರು ಅಳಿಲು ಸೇವಾ ಸಂಸ್ಥೆ-೨೦೦೬
೯. ಮಾತಂಗಿ ಮತ್ತು ಇತರ ಕಾದಂಕಥನಗಳು
ಧಾರವಾಡ ಪ್ರತಿಭಾ ಗ್ರಂಥಮಾಲೆ-೧೯೮೨
೧೦. ಕುಮುದಿನಿ ಹಾಗೂ ಇತರ ಕಾದಂ ಕಥನಗಳು
ಧಾರವಾಡ ಅನನ್ಯ ಪ್ರಕಾಶನ-೧೯೯೯
೧೧. ಕನ್ನಡ ಸಂಶೋಧನಾ ಶಾಸ್ತ್ರ
ಡಾ.ಎಂ.ಎಂ. ಕಲಬುರ್ಗಿ-ಸಪ್ನ ಬುಕ್ ಹೌಸ್, ಬೆಂಗಳೂರು-೨೦೦೯.

### ಬಿಡಿಲೇಖನಗಳು

೧. ಪುಸ್ತಕ ವರ್ಗೀಕರಣ ಸಂಕೇತ – ೧೯೪೯
೨. ಮರೆಯಲಾಗದ ಮುಂಬಯಿ – ೨೦೦೬
೩. ತುಂಗಭದ್ರೆ ನಾಡಿಗೆ ವರವೋ? ಶಾಪವೋ? – ೨೦೦೭
೪. ಭಾರತದಲ್ಲಿ ಮುದ್ರಣ ಕಲೆ – ೧೯೬೯

